# ಕೆ. ಎಸ್. ನರಸಿಂಹಸ್ವಾಮಿ

ಚಿ. ರಾ. ಗೋವಿಂದರಾಜು




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ.

**K. S. Narashimaswamy** : By C. R. Govinda Raju, Published by Dr.Karigowda Beechanahalli, Director, prasaranga, Kannada University, Hampi, Vidyaranya, Kamalalpura 583221, PP : VIII + 29 Rs. 10/-

First edition 1995.

**ನಮ್ಮವರು ಪುಸ್ತಕ ಮಾಲೆ ೧೦**



**ಪ್ರಕಾಶಕರು**

ಡಾ. ಕರೀಗೌಡ ಬೀಚನಹಳ್ಳಿ

ನಿರ್ದೇಶಕರು

ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ಕಮಲಾಪುರ-೫೮೩ ೨೨೧.

ಬೆಲೆ : ಹತ್ತು ರೂಪಾಯಿಗಳು

**ಮುದ್ರಕರು**

ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್

8/2, ಮಾರೇನಹಳ್ಳಿ, ಮೊದಲ ಅಡ್ಡ ರಸ್ತೆ,

23ನೇ ಮುಖ್ಯ ರಸ್ತೆ, ಬೆಂಗಳೂರು - 560 078

ದೂರವಾಣಿ : 642102

# ನಿಮ್ಮೊಡನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ, ಬೆಳಕನ್ನು ಉಂಟು ಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ-ಕಲೆ, ಅಭಿಜಾತ- ಜಾನಪದ, ಮಾರ್ಗ-ದೇಸಿ, ಸ್ವಕೀಯ-ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ, ಈಗಾಗಲೇ ಕೆಲವು ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗ, ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಯಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು, ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪವೆಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಕಿರುಪುಸ್ತಿಕೆಗಳ ರೂಪದಲ್ಲಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು

## ಪರಿವಿಡಿ

# ಕೆ. ಎಸ್. ನರಸಿಂಹಸ್ವಾಮಿ

ತಮ್ಮನ್ನು 'ದಾಂಪತ್ಯಕವಿ' ಎಂದು ಗುರುತಿಸಿಕೊಳ್ಳುವವರು ಕೆ. ಎಸ್. ನರಸಿಂಹಸ್ವಾಮಿ ಅವರು. ಆದರೆ ಕನ್ನಡ ಸಾಹಿತ್ಯಲೋಕ ಅವರನ್ನು ಪರಿಚಯಿಸಿಕೊಡುವುದು 'ಕನ್ನಡದ ಬರ್ನ್ಸ್', 'ಒಲವಿನಕವಿ', 'ಮಲ್ಲಿಗೆಕವಿ' ಎಂದೆಲ್ಲಾ. ಒಬ್ಬ ಬಡ ಮಧ್ಯಮ ವರ್ಗದ ವ್ಯಕ್ತಿ ಹೇಗೆ ತನ್ನ ಒಟ್ಟು ಜೀವನದ ಚೌಕಟ್ಟಿನಲ್ಲಿ ಬಾಳ್ವೆ ನಡೆಸುತ್ತಾನೆ ಎಂಬ ಪ್ರಧಾನ ಆಶಯ ಅವರ ಕಾವ್ಯದಲ್ಲಿ ಇದೆ. ಈ ಚೌಕಟ್ಟಿನಲ್ಲಿ ಪ್ರೀತಿ, ಪ್ರೇಮ, ನೋವು, ಸುಖ, ಮನೆ, ಹೆಂಡತಿ, ಮಕ್ಕಳು, ಸುತ್ತಮುತ್ತಲಿನ ಪರಿಸರ, ಸಾರ್ವಜನಿಕ ಜೀವನ ಮೊದಲಾದ ಮಾನವೀಯ ಮೌಲ್ಯಗಳ ಸಹಜ ತುಡಿತಗಳು ಅಭಿವ್ಯಕ್ತಗೊಂಡಿವೆ. ಇಂಥ ಸಹಜ ಪ್ರಕ್ರಿಯೆಯ ತುಡಿತಗಳೇ ಬದುಕಿನ ಸಾಂಸ್ಕೃತಿಕ ಅನನ್ಯತೆಯನ್ನು ತುಂಬಿಕೊಡುವುದು. ಈ ನಿಟ್ಟಿನಲ್ಲಿ ಕೆ. ಎಸ್. ನ ಒಬ್ಬ 'ಸಾಂಸ್ಕೃತಿಕ ಕವಿ' ಎಂದರೆ ಅತಿಶಯೋಕ್ತಿ ಅಲ್ಲ.

ಕವಿ ನರಸಿಂಹಸ್ವಾಮಿ ಅವರು ಮಂಡ್ಯ ಜಿಲ್ಲೆಯ ಕಿಕ್ಕೇರಿಯವರು. ತಂದೆ ಸುಬ್ಬರಾಯರು. ತಾಯಿ ಹೊಸಹೊಳಲಿನ ನಾಗಮ್ಮ. ಈ ದಂಪತಿಗಳಿಗೆ ಇಬ್ಬರೇ ಮಕ್ಕಳು. ಕೆ. ಎಸ್. ನ ಅವರೇ ಹಿರಿಯ ಮಗ. ತಂದೆ ಒಳ್ಳೆಯ ಪಿಟೀಲುವಾದಕರು. ಆದ್ದರಿಂದಲೇ ಕವಿಗೆ ಚಿಕ್ಕಂದಿನಿಂದಲೂ ಸಂಗೀತದ ಗೀಳು. ಸುಬ್ಬರಾಯರು ಕಂದಾಯ ಇಲಾಖೆಯ ಶಿರಸ್ತೇದಾರ್ ಆಗಿದ್ದರು. ತಂದೆಯ ಮೇಧಾವಿತನ, ಮಹಾಕಾವ್ಯಗಳಲ್ಲಿ ಇದ್ದಂಥ ಆಸಕ್ತಿ, ಉತ್ತಮ ಕೈಬರಹ, ಶಿಸ್ತುಬದ್ಧ ಜೀವನ ಮೊದಲಾದುವು ಕೆ. ಎಸ್.ನ ಅವರ ಗಮನ ಸೆಳೆದಿದ್ದವು. ಅಂತೆಯೇ ತಾಯಿಯ ಪ್ರೀತಿ -ವಾತ್ಸಲ್ಯಗಳು ಕವಿಯನ್ನು ಹೆಚ್ಚು ಪ್ರಭಾವಿತರನ್ನಾಗಿಸಿತ್ತು. ಇವರೀರ್ವರ ಮನೋಜೀವನ ಕೆ. ಎಸ್. ನ ಅವರ ಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಅಲ್ಲದೆ ಕವಿಯ ಮನೆ, ಸುತ್ತಲಿನ ಪರಿಸರ, ಹುಟ್ಟೂರು, ಆತ್ಮೀಯರೊಡನೆ ಇದ್ದ ಸಂಬಂಧ, ಅತಿಥಿಗಳಿಗೆ ತಂದೆ-ತಾಯಿಗಳು ನೀಡುತ್ತಿದ್ದ ಆದರ ಆತಿಥ್ಯಗಳು- ಹೀಗೆ ಅನೇಕ ಜೀವನಾನುಭವಗಳು ಪ್ರಭಾವ ಬೀರದೆ ಇರಲಿಲ್ಲ. ಈ ಎಲ್ಲ ಕಾರಣಗಳಿಂದಲೇ ನರಸಿಂಹಸ್ವಾಮಿ ಅವರು ವೃತ್ತಿ -ಪ್ರವೃತ್ತಿಗಳೆರಡರಲ್ಲೂ ಸುಕೋಮಲ ಸ್ವಭಾವವನ್ನು ಪಡೆದದ್ದು; ಸೃಜನಶೀಲ ಮನವನ್ನು ಕಾಯ್ದುಕೊಂಡು ಬಂದದ್ದು.

ನರಸಿಂಹಸ್ವಾಮಿ ಅವರು ಹುಟ್ಟಿದ್ದು ೧೯೧೫ ಜನವರಿ ೨೬ ರಂದು. 'ಮೈಸೂರು ಟ್ರೈನಿಂಗ್ ಕಾಲೇಜ್'ನ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಕೆ. ಎಸ್. ನ ತಮ್ಮ ಆರಂಭಿಕ ಶಿಕ್ಷಣವನ್ನು ಪಡೆದರು. ೧೯೨೧ ರಿಂದ ೧೯೨೮ರ ವರೆಗೂ ಈ ಸಂಸ್ಥೆಗಳಲ್ಲಿಯೇ ಓದಿದ ಅವರು ಮುಂದೆ ಪ್ರೌಢಶಿಕ್ಷಣಕ್ಕಾಗಿ ಮಹಾರಾಜ ಹೈಸ್ಕೂಲಿಗೆ ಸೇರಿದರು. ಇಲ್ಲಿ ಅವರು ವ್ಯಾಸಂಗ ಮಾಡಿದ್ದು ೧೯೨೮ ರಿಂದ ೧೯೩೧ರ ವರೆಗೆ. ಮೈಸೂರಿನ ಇಂಟರ್ ಮೀಡಿಯೇಟ್ ಕಾಲೇಜಿನಲ್ಲಿ ಓದುತ್ತಿದ್ದ ಅವರು ೧೯೩೪ರಲ್ಲಿ ಕಾರಣಾಂತರಗಳಿಂದ ಬೆಂಗಳೂರಿಗೆ ಬರಬೇಕಾಯಿತು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಪ್ರಥಮ ಬಿ. ಎ (ಜ್ಯೂನಿಯರ್) ತರಗತಿಗೆ ಸೇರಿದರು. ಇಂಗ್ಲಿಷ್, ಭೌತಶಾಸ್ತ್ರ, ಗಣಿತಶಾಸ್ತ್ರಗಳನ್ನು ಐಚ್ಛಿಕ ವಿಷಯಗಳನ್ನಾಗಿ ಆಯ್ದುಕೊಂಡಿದ್ದರು. ಆದರೆ ಬಿ. ಎ. ವ್ಯಾಸಂಗವನ್ನು ಪೂರ್ಣಗೊಳಿಸಲು ಆಗಲಿಲ್ಲ. ತಂದೆಯವರ ಮರಣದಿಂದಾಗಿ ವಿದ್ಯಾಭ್ಯಾಸವನ್ನು ಮೊಟಕುಗೊಳಿಸಿದ್ದು ಕೆ. ಎಸ್. ನ ಅವರಿಗೆ ಹೆಚ್ಚು ಸಂಕಟವನ್ನುಂಟು ಮಾಡಿತ್ತು. ಆದರೆ ಅದು ಅನಿವಾರ್ಯ ಸನ್ನಿವೇಶವೂ ಹೌದು. ಬಿ. ಎಂ. ಶ್ರೀ ಅಂಥ ಮೇಷ್ಟರನ್ನು ಪಡೆದಿದ್ದ ಕೆ. ಎಸ್. ನ ಅವರಿಗೆ ಅವರುಗಳನ್ನು ಮರೆಯುವುದು ಅಷ್ಟು ಸುಲಭ ಅನ್ನಿಸಲಿಲ್ಲ.

ಹಿರಿಯ ಮಗ ಕೆ. ಎಸ್. ನ ಅವರಿಗೆ ಮನೆಯ ಜವಾಬ್ದಾರಿಗಳು ಹೆಚ್ಚಾದವು. ಕೆಲಸದ ಬೆನ್ನುಹತ್ತಿದ ನರಸಿಂಹಸ್ವಾಮಿ ಅವರು ಅಕ್ಕಸಾಲಿಗರ ಅಂಗಡಿಯೊಂದರಲ್ಲಿ ಕೆಲಸಕ್ಕೆ ಸೇರಿದರು. ಕುಸುರಿ ಕೆಲಸದೊಂದಿಗೆ ಜೀವನ ಸಾಗಿಸಬೇಕಾಯಿತು. ಈ ನಡುವೆ ೧೯೩೬ ರ ಮಾರ್ಚಿ ತಿಂಗಳಿನಲ್ಲಿ ತಿಪಟೂರಿನ ವೆಂಕಮ್ಮನವರೊಂದಿಗೆ ಮದುವೆಯೂ ಆಯಿತು. ಮರುವರ್ಷ ಆಗಸ್ಟ್ ೨೬ ರಂದು ನೇಮಕಾತಿ ಇಲಾಖೆಯಿಂದ ಸರ್ಕಾರಿ ನೌಕರಿ ಪಡೆದರು. ಅವರ ಮೊದಲ ಕವನ ಸಂಕಲನ 'ಮೈಸೂರ ಮಲ್ಲಿಗೆ' ಪ್ರಕಟವಾದಾಗ (೧-೧-೧೯೪೨) ಮೈಸೂರಿನ ಪುರಸಭಾ ಕಚೇರಿಯಲ್ಲಿ ೨೫ ರೂಪಾಯಿ ಸಂಬಳದ ಎರಡನೆಯ ದರ್ಜೆಯ ಗುಮಾಸ್ತರಾಗಿದ್ದರು. ೨೬-೧-೧೯೭೦ ರಲ್ಲಿ ಹೌಸಿಂಗ್ ಬೋರ್ಡಿನ ಸೂಪರಿಂಟೆಂಡೆಂಟ್ ಆಗಿ ನಿವೃತ್ತಿ ಹೊಂದಿದ ಕೆ. ಎಸ್.ನ ಅವರು ಒಟ್ಟು ೩೩ ವರ್ಷಗಳ ಸರಕಾರಿ ಸೇವೆ ಸಲ್ಲಿಸಿದ್ದಾರೆ.

ಎಂಬತ್ತರ ಹೊಸ್ತಿಲಲ್ಲಿರುವ ಶ್ರೀಯುತರು ಬೆಂಗಳೂರಿನಲ್ಲಿ ತಮ್ಮ ವಿಶ್ರಾಂತಿ ಜೀವನವನ್ನು ನಡೆಸುತ್ತಿದ್ದಾರೆ. ನಾಲ್ಕು ಹೆಣ್ಣು, ನಾಲ್ಕು ಗಂಡು ಮಕ್ಕಳನ್ನು ಪಡೆದಿರುವ ಕೆ. ಎಸ್. ನ ದಂಪತಿಗಳು ಸಾಂಸಾರಿಕ ಜೀವನದ ಎಲ್ಲ ಮಗ್ಗುಲುಗಳನ್ನು ಹೊಕ್ಕು ಅನುಭವ ಗಳಿಸಿದವರು.

## ಕೃತಿಗಳು

ಕೆ. ಎಸ್. ನ ಅವರು ಇಂಗ್ಲಿಷಿನಲ್ಲಿ ಕಾವ್ಯರಚನೆ ಮಾಡಲಾರಂಭಿಸಿದವರು. ಇಂಗ್ಲಿಷಿನ ವರ್ಡ್ಸ್‌ವರ್ತ್, ರಾಬರ್ಟ್ ಬರ್ನ್ಸ್‌ರಂಥವರ ಪ್ರಭಾವ ಇವರ ಮೇಲೂ ಆಗಿತ್ತು. ಕವಿ ಕುವೆಂಪು ಅವರಿಗೆ ಕಸಿನ್ಸ್ ಕನ್ನಡದಲ್ಲಿ ಬರೆಯಲು ಹೇಳಿದಂತೆಯೇ ಕೆ.ಎಸ್.ನ ಅವರಿಗೂ ಪಟ್ಟಾಭಿರಾಮನ್ ಎಂಬ ಮೇಷ್ಟರೊಬ್ಬರು ಕನ್ನಡದಲ್ಲೇ ಬರೆಯಲು ಹುರಿದುಂಬಿಸಿದರು. ನರಸಿಂಹಸ್ವಾಮಿಯವರು ತಾವು ವಿದ್ಯಾರ್ಥಿ ಆಗಿದ್ದಾಗಲೇ ಕವನಗಳನ್ನು ರಚಿಸತೊಡಗಿದ್ದರು. ಅವರ 'ಕಬ್ಬಿಗನ ಕೂಗು' ಎಂಬ ಮೊದಲ ಕವನ ಪ್ರಕಟ ಆದದ್ದು 'ಪ್ರಬುದ್ಧ. ಕರ್ಣಾಟಕ'ದಲ್ಲಿ. ೧೪-೧-೧೯೩೩ರ ಸಂಚಿಕೆಯಲ್ಲಿ (ಸಂ - ೧೪, ಸಂ-೧) ಪ್ರಕಟವಾದ ಈ ಕವನಕ್ಕೆ ಪ್ರೊ. ಎ. ಆರ್ ಕೃಷ್ಣಶಾಸ್ತ್ರಿಗಳ ಪ್ರೋತ್ಸಾಹವೇ ಕಾರಣ. ಅಲ್ಲದೆ ಅವರು ( ಎ. ಆರ್. ಕೃ) ಕುವೆಂಪು ಅವರನ್ನು ಕಾಣಲು ನೀಡಿದ ಸಲಹೆ ಕವಿಗೆ ಮತ್ತಷ್ಟು ಉತ್ಸಾಹ ತಂದಿತು. ಅದರಂತೆ ಕವಿವರ್ಯ ಕುವೆಂಪು ಅವರನ್ನು ಭೇಟಿ ಮಾಡಿದರು. ಇವರ ಕವನಗಳನ್ನು ಓದಿದ ಕುವೆಂಪು ಬೆಳೆಯುವ ಪೈರನ್ನು ಮೊಳಕೆಯಲ್ಲೇ ಗುರ್ತಿಸಿದರು. ಅಂದು ಅವರು ಬೆನ್ನುತಟ್ಟಿದ್ದು ಕೆ. ಎಸ್. ನ ಅವರಿಗೆ ಕಾವ್ಯ ಸೃಷ್ಟಿಯಲ್ಲಿ ಸಂಪೂರ್ಣವಾಗಿ ತಲ್ಲೀನರಾಗುವಂತೆ ಮಾಡಿತು.

### ಮೈಸೂರ ಮಲ್ಲಿಗೆ

'ಮೈಸೂರ ಮಲ್ಲಿಗೆ' ಕನ್ನಡದಲ್ಲೇ ಅತ್ಯಂತ ಹೆಚ್ಚು ಮರು ಮುದ್ರಣಗಳನ್ನು (ಆವೃತ್ತಿಗಳನ್ನು) ನೋಡಿರುವ ಕವನ ಸಂಕಲನ. ಇದುವರೆವಿಗೂ ಇಪ್ಪತ್ತೆರಡಕ್ಕೂ ಹೆಚ್ಚಿನ ಮುದ್ರಣಗಳನ್ನು ನೋಡಿದೆ. ಕೆ. ಎಸ್. ನ ಅವರು ಬರೆದದ್ದು ಪ್ರೇಮ ಕವನಗಳಲ್ಲ. ಅವೆಲ್ಲವೂ ದಾಂಪತ್ಯ ಗೀತೆಗಳೇ ಆಗಿವೆ. 'ಮೈಸೂರ ಮಲ್ಲಿಗೆ' ಯಲ್ಲಿ ಇರುವುದು ಕವಿಯ ದಾಂಪತ್ಯ ಜೀವನದ ರಸಾನುಭವಗಳು. ಮದುವೆಗೆ ಮೊದಲು ಅವರು ಬರೆದ ಕವನಗಳು ಪ್ರಕೃತಿಗೆ ಸಂಬಂಧಪಟ್ಟವು. ಕೆ. ಎಸ್. ನ ಅವರಿಗೆ ಮದುವೆ ಆದದ್ದು ೧೯೩೬ರಲ್ಲಿ. 'ಮೈಸೂರ ಮಲ್ಲಿಗೆ' ಪ್ರಕಟವಾದುದು ೧೯೪೨ ರ ಹೊತ್ತಿಗೆ. ಈ ನಡುವಣ ಆರು ವರುಷಗಳಲ್ಲಿ ರಚಿಸಿದಂಥ ದಾಂಪತ್ಯ ಗೀತೆಗಳೆಲ್ಲವೂ ಮಾವನ ಮನೆಯಲ್ಲಿಯೇ. ಟಿ. ಎಸ್. ವೆಂಕಣ್ಣಯ್ಯನವರ ಕೃಪೆಯಿಂದ 'ಪ್ರಬುದ್ಧ ಕರ್ಣಾಟಕ'ದಲ್ಲಿ ಕೆ. ಎಸ್. ನ ಅವರ ಕವನಗಳು ಪ್ರಕಟ ಆಗುತ್ತಿದ್ದವು. ಈ ಕವಿತೆಗಳೆಲ್ಲವನ್ನೂ ಓದಿದ್ದ ತೀ. ನಂ. ಶ್ರೀ ಅವರು ಮಹಾರಾಜ ಕಾಲೇಜಿನ ' ಕರ್ನಾಟಕ ಸಂಘ'ವು ಇವರ ಕವಿತೆಗಳ ಒಂದು ಸಂಗ್ರಹವನ್ನು ತರಲು ಒಪ್ಪಿರುವುದಾಗಿ ಕೆ. ಎಸ್.

ನ ಅವರಿಗೆ ತಿಳಿಸಿದರು. ಅದರಂತೆ ಒಟ್ಟು ೬೦ ಕವನಗಳಲ್ಲಿ ತೀ. ನಂ. ಶ್ರೀ ಆರಿಸಿದ್ದು ೪೫ ಎ. ಆರ್ ಕೃಷ್ಣಶಾಸ್ತ್ರಿಗಳು ಆ ಕವನಗಳನ್ನು ಪರಾಮರ್ಶಿಸಿ ಅವಕ್ಕೆ ಒಪ್ಪುವಂಥ ಚಿತ್ರಗಳನ್ನು ಸಹ ಬರೆಸಿದರು. ಇದೇ ವೇಳೆಗೆ ಮಾಸ್ತಿ ಅವರೂ ಸಹ ಕೆ. ಎಸ್. ನ ಅವರ ಕವನಗಳ ಸಂಗ್ರಹವನ್ನು ಪ್ರಕಟಿಸುವ ಇಂಗಿತವನ್ನು ವ್ಯಕ್ತಪಡಿಸಿದರು. ಆದರೆ ಕೆ. ಎಸ್.ನ ಅವರು 'ಕರ್ಣಾಟಕ ಸಂಘ'ವು ಪ್ರಕಟಿಸುವ ವಿಷಯವನ್ನು ತಿಳಿಸಿದನಂತರ ಮಾಸ್ತಿ ಶುಭಹಾರೈಸಿದರು. ಮುನ್ನುಡಿಯನ್ನು ಅಪೇಕ್ಷಿಸಿ ಹೋಗಿದ್ದ ಕೆ. ಎಸ್. ನ ಅವರಿಗೆ ಡಿ.ವಿ.ಜಿ. ಅವರಿಂದ ಮೆಚ್ಚುಗೆಯ ಪತ್ರ ದೊರೆಯಿತು. ಈ ಪತ್ರವೇ ಕೃತಿಗೆ ಹೊಸರೀತಿಯ ಮುನ್ನುಡಿಯಾಗಿ ಬಳಕೆ ಆಗಿದೆ.

ವೆಸ್ಲಿ ಪ್ರೆಸ್ಸಿಗೆ ಮುದ್ರಣಕ್ಕಾಗಿ ಹೋಗಬೇಕಿದ್ದ ಕವನ ಸಂಕಲನಕ್ಕೆ ಯಾವ ಶೀರ್ಷಿಕೆಯನ್ನಿಡುವುದು ಎಂಬುದರ ಬಗ್ಗೆ ಯೋಚಿಸುವಂತೆ ಮಾಡಿತ್ತು. ಆದರೆ ಕೆ.ಎಸ್.ನ ಅವರು ಸೂಚಿಸಿದ್ದು 'ಮೈಸೂರ ಮಲ್ಲಿಗೆ' ಎಂದು. ಈ ಶೀರ್ಷಿಕೆಯ ಹಿನ್ನೆಲೆಗೆ ಸ್ಪೂರ್ತಿಯ ಸಣ್ಣಕತೆಯೇ ಇದೆ. ಕವಿಗೆ 'ಕ್ಲಾಕ್ ಟವರ್' ನ ಬಳಿ ಪರಿಚಿತವಿದ್ದ ಮುಸ್ಲಿಂ ಕುಟುಂಬವೊಂದಿತ್ತು. ಅವರ ಮನೆ ಕಸುಬು ಮಲ್ಲಿಗೆ ಹೂವಿನ ಹಾರಗಳನ್ನು ಕಟ್ಟಿ ಮಾರುವುದು. ಕೆ. ಎಸ್. ನ ಅವರು ತಮ್ಮ ಪುಸ್ತಕಕ್ಕೆ ಹೆಸರಿಡುವುದರ ಬಗ್ಗೆ ಯೋಚಿಸುತ್ತಿರುವುದಾಗಿ ಪ್ರಸ್ತಾಪಿಸಿದ್ದರು. ಅದಕ್ಕೆ ಆ ಮನೆಯ ಸಾಹೇಬ ಸೂಚಿಸಿದ್ದ ಹೆಸರೇ ' ಮೈಸೂರ ಮಲ್ಲಿಗೆ' ಆಗಿತ್ತು. ಈ ಶೀರ್ಷಿಕೆಯೇ ಕೆ. ಎಸ್. ನ ಅವರನ್ನು ಎಂದೆಂದಿಗೂ ಗುರುತಿಸುವಂತೆ ಮಾಡಿದ್ದು.

ಹೀಗೆ 'ಕರ್ನಾಟಕ ಸಂಘ'ದ ವತಿಯಿಂದ ಪ್ರಕಟವಾದ ಮೈಸೂರ ಮಲ್ಲಿಗೆ (೧-೧-೧೯೪೨) ಒಟ್ಟು ೪೫ ಕವನಗಳನ್ನು ಒಳಗೊಂಡಿದೆ. ಬಿಡುಗಡೆ ಸಮಾರಂಭದ ಅಂದಿನ ಸಂಜೆ ಹಿರಿಯ ಕವಿ ಕುವೆಂಪು ಅವರು ನರಸಿಂಹಸ್ವಾಮಿಯವರನ್ನು ಹರಸಿದರು. ಅಲ್ಲದೆ ಎ. ಆರ್. ಕೃಷ್ಣಶಾಸ್ತ್ರಿ, ತೀ. ನಂ. ಶ್ರೀ, ಡಿ. ವಿ. ಜಿ, ಟಿ. ಎಸ್. ವೆಂಕಣ್ಣಯ್ಯ ಮೊದಲಾದ ಹಿರಿಯರ ಮೆಚ್ಚುಗೆ ವ್ಯಕ್ತಪಟ್ಟಿತು. ಈ ಎಲ್ಲ ಹಿರಿಯರ ಹಾರೈಕೆಗಳೊಂದಿಗೆ ಕವಿ ಕೆ. ಎಸ್. ನ ಮರೆಯಲಾಗದ 'ಮೈಸೂರ ಮಲ್ಲಿಗೆ'ಯನ್ನು ನೀಡಿದ್ದಾರೆ.

**ಐರಾವತ**

'ಐರಾವತ' ಕೆ. ಎಸ್. ನ ಅವರ ಎರಡನೆಯ ಕವನ ಸಂಕಲನ. ಗಾಂಧೀವಾದಿಯೂ, ಸ್ನೇಹಿತರೂ ಆಗಿದ್ದ ಎಚ್. ಎಸ್. ದೊರೆಸ್ವಾಮಿ ಅವರು ೧೯೪೫ ರ ಜೂನ್‌ನಲ್ಲಿ ಈ ಕೃತಿಯನ್ನು ಪ್ರಕಟಿಸಿದರು. ಈ ಕೃತಿಯು ಪ್ರಕಟ ಆಗುವ ವೇಳೆಗೆ ತೀ. ನಂ. ಶ್ರೀ ಅವರಿಗೆ ಬೆಂಗಳೂರಿಗೆ ವರ್ಗವಾಗಿತ್ತು. ಆದ್ದರಿಂದ ಅವರ ಸ್ಥಾನವನ್ನು ಅಲಂಕರಿಸಿದ್ದ ವಿ. ಸೀತಾರಾಮಯ್ಯ ಅವರಿಗೆ ತಮ್ಮ ೨೦ ಕವನಗಳನ್ನು ಕೆ. ಎಸ್. ನ ತೋರಿಸಿದರು. ಅವರು ಆರಿಸಿದ್ದು ೧೮. 'ಮೈಸೂರ ಮಲ್ಲಿಗೆ' ಯಂತೆಯೇ 'ಐರಾವತ'ವೂ ಕೂಡ ಬಹಳ ಬೇಗ ಜನಪ್ರಿಯವಾಯಿತು. ಆರ್ಥಿಕವಾಗಿ ಸಂಕಷ್ಟಕ್ಕೀಡಾಗಿದ್ದ ಕೆ.ಎಸ್.ನ ಅವರು ಕೃತಿಯ ಪ್ರಕಾಶನದ ಹಕ್ಕನ್ನು ಗೆಳೆಯ ಡಿ.ವಿ.ಕೆ.

ಮೂರ್ತಿ ಅವರಿಗೆ ಇನ್ನೂರು ರೂಪಾಯಿಗಳಿಗೆ ಮಾರಾಟ ಮಾಡಿದ್ದೂ ಉಂಟು. ಸದ್ಯಕ್ಕೆ 'ಐರಾವತ'ವು ನಾಲ್ಕು ಮುದ್ರಣಗಳನ್ನು ನೋಡಿದೆ.

**ದೀಪದ ಮಲ್ಲಿ**

'ದೀಪದ ಮಲ್ಲಿ' ನರಸಿಂಹಸ್ವಾಮಿ ಅವರ ಮೂರನೆಯ ಸಂಕಲನ. 'ಐರಾವತ' ಪ್ರಕಟ ಆದ ಎರಡು ವರುಷಗಳ ಅನಂತರ ಈ ಕೃತಿ ಪ್ರಕಟವಾಯಿತು. ೧೯೪೭ ರಲ್ಲಿ ಮೊದಲ ಮುದ್ರಣ ಕಂಡ 'ದೀಪದ ಮಲ್ಲಿ' ಯಲ್ಲಿ ಒಟ್ಟು ೩೬ ಕವನಗಳು ಇವೆ. ಮೊದಲ ಎರಡು ಸಂಕಲನಗಳಿಗಿಂತ ತುಸು ಭಿನ್ನವಾಗಿರುವ ' ದೀಪದಮಲ್ಲಿ' ಯಲ್ಲಿ ಒಲವಿನ ಜೊತೆಗೆ ನೋವೂ ಸಹ ಮೇಳೈಸಿಕೊಂಡಿದೆ. ಬದುಕಿನ ಇನ್ನೊಂದು ಮಗ್ಗುಲನ್ನು ಪರಿಚಯಿಸುವ ಈ ಕೃತಿಯಲ್ಲಿ ಜನಮೆಚ್ಚುಗೆ ಪಡೆದ ಕವನಗಳೂ ಇವೆ. 'ಐರಾವತ' ಮತ್ತು 'ದೀಪದ ಮಲ್ಲಿ' ಇವೆರಡು ಆಯಾ ಸಂಕಲನಗಳಲ್ಲಿ ಇರುವಂಥ ಕವನಗಳ ಶೀರ್ಷಿಕೆಗಳೂ ಹೌದು . ಈ ಸಂಕಲನವೂ ಸಹ ಇದುವರೆಗೆ ನಾಲ್ಕು ಮುದ್ರಣಗಳನ್ನು ನೋಡಿದೆ.

**ಉಂಗುರ**

'ಉಂಗುರ' ಕೆ. ಎಸ್. ನ ಅವರ ನಾಲ್ಕನೆಯ ಸಂಕಲನದ ಶೀರ್ಷಿಕೆ. ಇದರ ಮೊದಲ ಮುದ್ರಣ ೧೯೪೯ ರಲ್ಲಿ. 'ದೀಪದ ಮಲ್ಲಿ' ಪ್ರಕಟವಾದ ಎರಡು ವರುಷಗಳಿಗೆ 'ಉಂಗುರ' ಪ್ರಕಟ ಆಯಿತು. ಇದರಲ್ಲಿ ಒಟ್ಟು ೩೦ ಕವನಗಳಿವೆ.

ಈ 'ಉಂಗುರ' ದಲ್ಲಿ ಕವಿಗೆ ಪ್ರಿಯವಾದಂಥ 'ಮನೆಗೆ ಬಂದ ಹೆಣ್ಣು' ಕವನವಿದೆ. ವಿ. ಸೀ ಅವರ ಮೆಚ್ಚುಗೆ ಪಡೆದ 'ಪ್ರಥಮ ರಾಜನಿಗೆ' ಕವನವೂ ಇದರಲ್ಲೇ ಇದ್ದು ಅವರೇ ಇಂಗ್ಲಿಷಿಗೂ ಅನುವಾದ ಮಾಡಿದ್ದಾರೆ. ಅಲ್ಲದೆ ಎ. ಕೆ. ರಾಮಾನುಜನ್‌ರು ಮೆಚ್ಚಿ ಭಾಷಾಂತರಿಸಿದ 'ಗಾನ ಮಂದಿರದಲ್ಲಿ' ಕವನ ಇರುವುದು 'ಉಂಗುರ' ದಲ್ಲಿಯೇ. ರಾಮಾನುಜನ್‌ರ ಪ್ರಯತ್ನ ಬಹಳ ಯಶಸ್ವಿಯಾಗಿದೆ ಎಂದು ಕೆ. ಎಸ್. ನ ಅಭಿಪ್ರಾಯ ಪಡುತ್ತಾರೆ. ಇದರಲ್ಲಿ ಪ್ರೇಮ ಅಥವಾ ಒಲವಿನ ಕವಿತೆಗಳು ವಿರಳ. 'ಉಂಗುರ' ವೂ ಸಹ ನಾಲ್ಕು ಮುದ್ರಣಗಳನ್ನು ಕಂಡಿದೆ.

**ಇರುವಂತಿಗೆ**

ಕವಿಯ ಐದನೆಯ ಸಂಕಲನ 'ಇರುವಂತಿಗೆ' ಒಟ್ಟು ೨೮ ಕವನ ಗಳನ್ನೊಳಗೊಂಡಿದೆ. ಈ ಕೃತಿಯು ಮೊದಲು ಮುದ್ರಣ ಆದದ್ದು ೧೯೫೨ರಲ್ಲಿ. 'ಉಂಗುರ'ಕ್ಕೂ 'ಇರುವಂತಿಗೆ'ಗೂ ಮೂರು ವರುಷಗಳ ಅಂತರ. ಇರುವಂತಿಗೆಯಲ್ಲಿನ ಮೊದಲ ಕವನವಾದ 'ಅಕ್ಕಿಯಾರಿಸುವಾಗ' ಇಂದಿಗೂ ಸಹ ಜನಮನ್ನಣೆ ಪಡೆದಿದೆ. ಅದೇ ರೀತಿಯಲ್ಲಿ 'ನಿನ್ನ ಹೆಸರು' ಕವಿತೆಯೂ ಸಹ. 'ಇರುವಂತಿಗೆ' ಇದುವರೆವಿಗೆ ನಾಲ್ಕು ಮುದ್ರಣಗಳನ್ನು ನೋಡಿದೆ.

## ಶಿಲಾಲತೆ

'ಇರುವಂತಿಗೆ' ಪ್ರಕಟವಾದ ನಾಲ್ಕು ವರುಷಗಳಿಗೆ 'ಶಿಲಾಲತೆ' ಪ್ರಕಟ ಆಯಿತು. ಅಂದರೆ ೧೯೫೮ರಲ್ಲಿ. ಇದು ಕೆ. ಎಸ್. ನ ಅವರ ಆರನೆಯ ಸಂಕಲನವಾಗಿದ್ದು ಒಟ್ಟು ೫೭ ಕವನಗಳಿವೆ. ಇದರಲ್ಲಿನ ಕೆಲವು ಕವನಗಳಲ್ಲಿ ವಿ. ಸೀ ಅವರ ಪ್ರಭಾವವನ್ನು ಗುರುತಿಸಬಹುದು. ಅಲ್ಲದೆ ಡಿ. ಎಲ್. ನರಸಿಂಹಾಚಾರ್ಯರ ಮುನ್ನುಡಿ ಹಾಗೂ ಕವನಗಳ ವಿಶ್ಲೇಷಣೆಯೂ ಇದೆ. ವಿಮರ್ಶಕರ ಗಮನ ಸೆಳೆದಂಥ 'ಗಡಿಯಾರದಂಗಡಿಯ ಮುಂದೆ' ಕವನ ಇರುವುದು ಈ ಸಂಕಲನದಲ್ಲಿಯೇ. ಇದನ್ನು ಕೆ. ಎಸ್. ನ ಅವರ ಗೆಳೆಯ ಕೆ. ನರಸಿಂಹ ಮೂರ್ತಿ ಅವರು ಇಂಗ್ಲಿಷಿಗೆ ತರ್ಜುಮೆ ಮಾಡಿದ್ದಾರೆ. ಜನಪ್ರಿಯಗೊಂಡಿರುವ ' ಹಿಂದಿನ ಸಾಲಿನ ಹುಡುಗರು' ಕವನವೂ ಸಹ ಈ ಸಂಕಲನದಲ್ಲಿ ಸೇರಿದೆ. ಇದರಲ್ಲಿ ಕವಿ ಕೆ. ಎಸ್. ನ ಅವರು ಖುದ್ದಾಗಿ ಮೆಚ್ಚಿಕೊಂಡ ಎರಡು ಕವನಗಳು 'ಬಿಳಿ ಬೆಳಕಿನ ಬಾನಾಡಿ' ಮತ್ತು 'ಕೇಳಬೇಡ ಎಲ್ಲಿಗೆ' ಎಂಬುವು. ಶಿಲಾಲತೆ ನಾಲ್ಕು ಬಾರಿ ಮರು ಮುದ್ರಣಗೊಂಡಿದೆ.

## ಮನೆಯಿಂದ ಮನೆಗೆ

೧೯೬೦ ರಲ್ಲಿ ಮೊದಲ ಮುದ್ರಣ ಕಂಡ ಕೆ. ಎಸ್. ನ ಅವರ ಏಳನೆಯ ಕವನ ಸಂಕಲನವೇ 'ಮನೆಯಿಂದ ಮನೆಗೆ'. ವಿ. ಸೀ. ಅವರ ವಿಸ್ತೃತ ಮುನ್ನುಡಿ ಇರುವ ಇದರಲ್ಲಿ ಒಟ್ಟು ೨೩ ಕವನಗಳು ಇವೆ. ಕೆಲವು ಭಾವಗೀತೆಗಳು ಹಾಗೂ ಕೆಲವು ನೇರ ಭಾಷಾಂತರದ ಕವಿತೆಗಳೂ ಈ ಸಂಕಲನದಲ್ಲಿ ಇವೆ. 'ಮನೆಯಿಂದ ಮನೆಗೆ' ಕವನವು ಹೆಚ್ಚು ಜನಪ್ರಿಯವಾದುದೂ ಹೌದು. ಬಡ ಮಧ್ಯಮ ವರ್ಗದ ಒಟ್ಟು ಚಿತ್ರಣ ಈ ಕವಿತೆಯಲ್ಲಿ ಅಭಿವ್ಯಕ್ತಗೊಳ್ಳುತ್ತದೆ.

## ತೆರೆದ ಬಾಗಿಲು

'ಮನೆಯಿಂದ ಮನೆಗೆ' ಸಂಕಲನ ಪ್ರಕಟವಾದ ಅನಂತರ ಹದಿನಾರು ವರುಷಗಳವರೆಗೆ ಕೆ. ಎಸ್. ನ ಅವರು ಯಾವುದೇ ಸಂಕಲನವನ್ನು ಪ್ರಕಟಿಸಲಿಲ್ಲ. ಕಾವ್ಯರಚನೆಯನ್ನೇ ನಿಲ್ಲಿಸಿದ್ದರು ಎಂಬುದು ಇದರರ್ಥವಲ್ಲ. ಕಾವ್ಯರಚನೆ ನಡೆದೇ ಇತ್ತು. ಆದರೆ ಪ್ರಕಟಿಸಲಿಲ್ಲ ಅಷ್ಟೇ. ಇದಕ್ಕೆ ಕಾರಣವಿಲ್ಲದಿಲ್ಲ. ಕೆ. ಎಸ್. ನ ಅವರಿಗೆ ತಾವೇ ಸ್ವತಃ ತಮ್ಮ ಕವನ ಸಂಕಲನವೊಂದನ್ನು ಪ್ರಕಟಿಸುವ ಹಂಬಲ. ಈ ಹಂಬಲದ ಪ್ರಯತ್ನವೇ 'ತೆರೆದ ಬಾಗಿಲು'. ೧೯೭೬ರಲ್ಲಿ ಕೆ. ಎಸ್.ನ ಅವರು ಇದನ್ನು ಪ್ರಕಟಿಸಿದರು. ಇದು ಅವರ ಎಂಟನೆಯ ಕವನ ಸಂಕಲನ. ಇದರ ಪ್ರಕಟನೆಗೆ ಬಂಧುಗಳಾಗಿದ್ದ ಪ್ರೊ. ಜಿ. ವೆಂಕಟಸುಬ್ಬಯ್ಯನವರ ಪ್ರೋತ್ಸಾಹವೇ ಕಾರಣ. ಡಾ.ಹಾ.ಮಾ. ನಾಯಕರು ಬಿಡುಗಡೆ ಮಾಡಿದ ಈ ಕೃತಿಯಲ್ಲಿ ಪ್ರೊ. ಎಲ್. ಎಸ್. ಶೇಷಗಿರಿರಾಯರ ಉತ್ತಮ ಮುನ್ನುಡಿಯೂ ಇದೆ. ಬಹಳ ಬೇಗನೆ ಪ್ರತಿಗಳು ಮುಗಿದು ಹೋದದ್ದರಿಂದ ಮರುವರುಷವೇ ಇನ್ನೊಂದು ಮುದ್ರಣವನ್ನು ನೋಡಿತು. ೧೯೭೭ರಲ್ಲಿ

ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ಸಹ ಈ ಕೃತಿಗೆ ಲಭಿಸಿದೆ. 'ತೆರೆದ ಬಾಗಿಲು', 'ಕುಂಕಮ ಭೂಮಿ' ಕವನಗಳನ್ನು ಪ್ರೊ. ಕೆ. ರಾಘವೇಂದ್ರರಾವ್ ಅವರೂ ಹಾಗೂ 'ರೈಲ್ವೆ ನಿಲ್ದಾಣ' ದಲ್ಲಿ ಎಂಬ ಕವನವನ್ನು ವಿ. ಸೀ. ಅವರೂ ಇಂಗ್ಲಿಷಿಗೆ ಅನುವಾದಿಸಿದ್ದಾರೆ. ೧೯೯೧ರಲ್ಲಿ 'ಶಿಲಾಲತೆ' ಮೂರನೆಯ ಮುದ್ರಣ ಕಂಡಿದೆ.

## ನವಪಲ್ಲವ

'ನವಪಲ್ಲವ' ನರಸಿಂಹಸ್ವಾಮಿ ಅವರ ಒಂಬತ್ತನೆಯ ಕವನ ಸಂಕಲನ. ಇದು ೧೯೮೩ರಲ್ಲಿ ಪ್ರಕಟವಾಯಿತು. 'ತೆರೆದ ಬಾಗಿಲು' ಪ್ರಕಟವಾದ ಏಳು ವರುಷಗಳಿಗೆ ಈ ಕೃತಿ ಹೊರಬಂದಿದೆ. ಅಲ್ಲಲ್ಲಿ ಪ್ರಕಟವಾಗಿದ್ದ ಬಿಡಿ ಕವನಗಳು ಹಾಗೂ ಆಕಾಶವಾಣಿಗಾಗಿ ಬರೆದ ಕೆಲವು ಕವಿತೆಗಳು ಇದರಲ್ಲಿ ಸೇರಿವೆ. ಈ ಸಂಕಲನದಲ್ಲಿರುವುದು ಒಟ್ಟು ೨೭ ಕವನಗಳು. ಈ ಕೃತಿಯಿಂದ ಆಯ್ದ ಎಂಟು ಕವನಗಳ ಒಂದು ಕ್ಯಾಸೆಟ್ ಸಹ ಹೊರಬಂದಿದೆ. ಹಾಗೂ ಹೆಚ್ಚು ಜನಪ್ರಿಯವೂ ಆಗಿವೆ.

## ಮಲ್ಲಿಗೆ ಮಾಲೆ

೧೯೮೭ರಲ್ಲಿ ಕೆ. ಎಸ್. ನ ಅವರ ಸಮಗ್ರ ಕವನಗಳ ಸಂಗ್ರಹ ಪ್ರಕಟ ಆಯಿತು. ಅದೇ 'ಮಲ್ಲಿಗೆ ಮಾಲೆ'. ಇದರಲ್ಲಿ ಎಂಟು ಅಪ್ರಕಟಿತ ಕವನಗಳೂ ಸೇರಿವೆ. ೫೦೦ ಪುಟಗಳ ಈ 'ಮಲ್ಲಿಗೆ ಮಾಲೆ'ಯಲ್ಲಿ ಒಟ್ಟು ೨೫೮ ಕವನಗಳುಂಟು.

## ದುಂಡು ಮಲ್ಲಿಗೆ

'ಮಲ್ಲಿಗೆ ಮಾಲೆ' ಸಮಗ್ರ ಕಾವ್ಯ ಪ್ರಕಟವಾದ ಏಳು ವರುಷಗಳ ತರುವಾಯ ೧೯೯೩ರಲ್ಲಿ 'ದುಂಡುಮಲ್ಲಿಗೆ' ಕವನ ಸಂಕಲನ ಪ್ರಕಟವಾಯಿತು. ಒಟ್ಟು ೪೨ ಕವನಗಳಿರುವ ಈ ಕೃತಿಯನ್ನು ' ತುಷಾರ' ಮಾಸಪತ್ರಿಕೆಯವರು ತಮ್ಮ ಪತ್ರಿಕೆಯ ೨೦ ವರುಷಗಳ (೧೯೭೩-೯೩) ಹುಟ್ಟು ಹಬ್ಬದ ಸಂದರ್ಭದಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿನ ಕೆಲವು ಕವಿತೆಗಳು ಕ್ಯಾಸೆಟ್ ರೂಪದಲ್ಲಿ ಜನರನ್ನು ತಲುಪಿವೆ.

'ದುಂಡು ಮಲ್ಲಿಗೆ'ಯ ಅನಂತರ ಅವರ ಪ್ರಕಟಿತ ಹಾಗೂ ಅಪ್ರಕಟಿತ ಕವನಗಳೆಲ್ಲವನ್ನೂ ಒಟ್ಟಾಗಿ ಸೇರಿಸಿ ೧೯೯೪ರ ಜೂನ್ ೧೫ರಂದು ಮತ್ತೊಮ್ಮೆ 'ಮಲ್ಲಿಗೆ ಮಾಲೆ' ಸಮಗ್ರ ಕಾವ್ಯವನ್ನು ಹೊರತರಲಾಗಿದೆ.

# ಇತರ ಸಾಹಿತ್ಯ ಕೃತಿಗಳು

ಕೆ. ಎಸ್. ನರಸಿಂಹಸ್ವಾಮಿ ಅವರು ತಮ್ಮನ್ನು ತಾವು ಕಾವ್ಯ ಮಾಧ್ಯಮದ ಮೂಲಕ ಅಭಿವ್ಯಕ್ತಿಸಿಕೊಂಡಿರುವಷ್ಟು ಉಳಿದ ಸಾಹಿತ್ಯ ಪ್ರಕಾರಗಳಲ್ಲಿ ಗುರುತಿಸಿಕೊಂಡಿಲ್ಲ. ಹೀಗೆ ಹೇಳುವುದರ ಮೂಲಕ ಗದ್ಯದಲ್ಲಿ ಅವರು ಕೆಲಸವನ್ನೇ ಮಾಡಿಲ್ಲ ಎಂದು ಅರ್ಥವಲ್ಲ. ತಮ್ಮದೇ ಆದ ಪರಿಣತ ಶೈಲಿಯನ್ನು ಗದ್ಯದಲ್ಲೂ ದಾಖಲು ಮಾಡಿದ್ದಾರೆ. ಆದರೆ ಕಾವ್ಯಕ್ಕೆ ಮಾತ್ರ ಮೊದಲ ಪ್ರಾಶಸ್ತ್ಯ.

ಕೆ. ಎಸ್. ನ ಅವರು ಸ್ವತಂತ್ರವಾಗಿ ಬರೆದಿರುವುದು ಮೂರು ಕೃತಿಗಳನ್ನು ಮಾತ್ರ. ಉಳಿದಂತೆ ಅನುವಾದಗಳೇ ಹೆಚ್ಚು.

**ಮಾರಿಯ ಕಲ್ಲು**

'ಮಾರಿಯ ಕಲ್ಲು' ಸಣ್ಣ ಕತೆಗಳ ಸಂಕಲನ. ಇದರಲ್ಲಿ ಒಟ್ಟು ಏಳು ಕತೆಗಳು ಇವೆ. ಅವುಗಳಲ್ಲಿ 'ಮಾರಿಯ ಕಲ್ಲು' ಎಂಬುದೂ ಸಹ ಒಂದು. ಅಲ್ಲದೆ ಅತಿ ಮುಖ್ಯ ಅನ್ನಿಸುವ ಕತೆಯೂ ಹೌದು. ಗ್ರಾಮೀಣ ಜನತೆಯ ದೇವರ ಬಗೆಗಿನ ನಂಬಿಕೆಯ ವಸ್ತುವನ್ನು ಒಳಗೊಂಡದ್ದು ಈ 'ಮಾರಿ' ಕತೆ. ಇದರಲ್ಲಿ 'ಪ್ರಾಣಿಬಲಿ'ಯನ್ನು ತಡೆಗಟ್ಟುವ ಪ್ರಯತ್ನ, ಆಶಯ ಕೆ. ಎಸ್. ನ ಅವರದು. ಮೂಢನಂಬಿಕೆಗಳನ್ನು ಅಲ್ಲಗಳೆಯುವ ಈ ಕತೆ 'ಮಾರಿ'ಯನ್ನು 'ಲಕ್ಷ್ಮಿ' ಯನ್ನಾಗಿ ಪರಿವರ್ತಿಸುತ್ತದೆ. ಅಂತೆಯೇ ಉಳಿದ ಕತೆಗಳೂ ಸಹ ಗಮನ ಸೆಳೆಯುತ್ತವೆ.

ನವಸಾಕ್ಷರಿಗಾಗಿ ಈ 'ಮಾರಿಯಕಲ್ಲು' ಕಥಾ ಸಂಕಲನವನ್ನು ಬಹಳ ಆಸಕ್ತಿದಾಯಕವಾಗಿ ಬರೆಯಲಾಗಿದೆ. ಸರಳ ಭಾಷೆಯ ಬಳಕೆಯಿಂದಾಗಿ ಜನಸಾಮಾನ್ಯರು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಕವಿತೆಗಳನ್ನೇ ಅಲ್ಲದೆ ಕತೆಗಳನ್ನೂ ತಾನು ಬರೆಯಬಲ್ಲೆ ಎಂಬುದನ್ನು ಕೆ. ಎಸ್. ನ ಈ ಮೂಲಕ ರುಜುವಾತುಪಡಿಸಿದ್ದಾರೆ. ಈ ಕಥಾಸಂಕಲನ ಪ್ರಕಟ ಆದದ್ದು ೧೯೪೨ರಲ್ಲಿ.

**ದಮಯಂತಿ**

'ದಮಯಂತಿ' ಗದ್ಯರೂಪದಲ್ಲಿ ಬರೆದ ಸ್ವತಂತ್ರ ಕೃತಿ. ೧೯೬೦ ರಲ್ಲಿ ಪ್ರಕಟವಾದ ಈ ಕೃತಿಯನ್ನು ಕೆ. ಎಸ್. ನ ಬಹಳ ರಸವತ್ತಾಗಿ ಚಿತ್ರಿಸಿದ್ದಾರೆ. ನಳ ಕತೆಯು ಭಾರತದಲ್ಲಿ ಚಿರಪರಿಚಿತ. ಆದರೆ 'ನಳ' ನನ್ನೇ ಏಕೆ ಕೇಂದ್ರವನ್ನಾಗಿ ಇಟ್ಟುಕೊಂಡು ಆ ಕತೆಯನ್ನು ನೋಡಬೇಕು ಎಂಬುದು ಕೆ. ಎಸ್. ನ ಅವರ ಪ್ರಶ್ನೆ. ಆದ್ದರಿಂದಲೇ ಅವರು

'ದಮಯಂತಿ' ಯ ಮೂಲಕ ಕತೆಯನ್ನು ನೋಡುತ್ತಾರೆ. ಈ ಪ್ರಯತ್ನವೇ 'ದಮಯಂತಿ'. ಇದು ಅವರ 'ಸ್ತ್ರೀವಾದಿ' ಮನೋಭಾವಕ್ಕೆ ಹಿಡಿದ ಕನ್ನಡಿ.

**ಉಪವನ**

ಕೆ. ಎಸ್. ನ ಅವರ ಗದ್ಯ ಕೃತಿಗಳಲ್ಲೇ ಮುಖ್ಯ ಅನ್ನಿಸುವುದು 'ಉಪವನ'. ಇದು ಅವರ ಪ್ರಬಂಧ- ವಿಮರ್ಶಾ ಲೇಖನಗಳ ಸಂಗ್ರಹ. ೧೯೫೮ ರಲ್ಲಿ ಪ್ರಕಟವಾದ ಈ ಕೃತಿಯಲ್ಲಿ ಒಟ್ಟು ೧೯ ಲೇಖನಗಳು ಇವೆ. ಇವುಗಳಲ್ಲಿ ಕೆಲವನ್ನು 'ಪುಸ್ತಕ ಪ್ರಪಂಚ', 'ಗ್ರಾಮೋದ್ಯೋಗ ಮತ್ತು ಸಹಕಾರ', 'ಜೀವನ' ಮೊದಲಾದ ಕಡೆ ಪ್ರಕಟಿಸಿದ್ದರು. ಉಪವನದ ೧೯ ಲೇಖನಗಳಲ್ಲಿ ೭ ಪುಸ್ತಕಾವಲೋಕನಗಳು, ೭ ಪ್ರಬಂಧಗಳು ಸೇರಿವೆ. ಜನಪದ ಸಾಹಿತ್ಯ ಹಾಗೂ ನವ್ಯಕಾವ್ಯದ ಸ್ವರೂಪಕ್ಕೆ ಸಂಬಂಧಿಸಿದಂತೆ ಒಂದೊಂದು ಲೇಖನಗಳಿವೆ. ಉಳಿದ ಮೂರರಲ್ಲಿ ಎರಡು ವ್ಯಕ್ತಿ ಚಿತ್ರಣಕ್ಕೂ ಮತ್ತೊಂದು ಪ್ರವಾಸ ಕಥನಕ್ಕೂ ಸಂಬಂಧಪಟ್ಟವು.

ಈ ಮೇಲಿನ ಮೂರು ಸ್ವತಂತ್ರ ಕೃತಿಗಳ ಹೊರತಾಗಿ ಕೆ. ಎಸ್. ನ ಅವರು ಅನುವಾದದಲ್ಲೂ ಕೆಲಸ ಮಾಡಿದ್ದಾರೆ. ಇಂಗ್ಲಿಷಿನಿಂದ ಕನ್ನಡಕ್ಕೆ ತಂದ ಅವರ ಕೃತಿಗಳು ಯಶಸ್ವಿ ಪ್ರಯತ್ನ ಅನ್ನಿಸಿವೆ. ಹಾಗೆಯೇ ಜನಮೆಚ್ಚುಗೆ ಪಡೆದಿವೆ. ಕೆ. ಎಸ್.ನ ಅವರು ಒಟ್ಟು ಒಂಬತ್ತು ಕೃತಿಗಳನ್ನು ಕನ್ನಡಿಸಿದ್ದಾರೆ. ಅವು :

**ಹಕಲ್‌ಬರಿ ಫಿನ್ನನ ಸಾಹಸಗಳು**

ಕೆ. ಎಸ್. ನ ಅವರು ಕನ್ನಡಕ್ಕೆ ಅನುವಾದಿಸಿದ್ದು ಒಂದೇ ಕಾದಂಬರಿಯನ್ನು ಮಾತ್ರ. ಅದೇ ಹಕಲ್‌ಬರಿ ಫಿನ್ನನ ಸಾಹಸಗಳು (Adventures of Huckle Berry Finn). ಅಮೇರಿಕಾದ ಬರಹಗಾರನಾದ ಮಾರ್ಕ್‌ಟ್ವೇನ್ ಈ ಕೃತಿಯ ಮೂಲಕರ್ತೃ. ಇದನ್ನು ಕೆ. ಎಸ್.ನ ಅವರು ಇಂಗ್ಲಿಷಿನಿಂದ ಕನ್ನಡಕ್ಕೆ ತಂದದ್ದು ೧೯೬೯ ರಲ್ಲಿ.

**ಮೀಡಿಯಾ**

ಇದು ಯೂರಿಪಿಡೀಸ್‌ನ ಗ್ರೀಕ್ ನಾಟಕ. ಹೆಣ್ಣೊಬ್ಬಳು ತನ್ನ ಗಂಡನಿಂದ ಮೋಸಕ್ಕೆ ಒಳಗಾಗಿ ಆತನ ವಿರುದ್ಧ ಸೇಡನ್ನು ತೀರಿಸಿಕೊಳ್ಳುವ ವಸ್ತು ಈ ನಾಟಕದ್ದು. ಇದರಲ್ಲಿ ಪ್ರೇಮ-ಪಾವಿತ್ರ್ಯ, ಪ್ರವೃತ್ತಿ- ವಿವೇಕಗಳ ತೊಳಲಾಟ ಕಂಡು ಬರುತ್ತದೆ. ಮೀಡಿಯಾಳ ಭಾವನೆಗಳನ್ನು ಬಹಳ ಪರಿಣಾಮಕಾರಿಯಾಗಿ ಕನ್ನಡಿಸಿದ್ದಾರೆ. ಈ ನಾಟಕವನ್ನು ಕೆ. ಎಸ್. ನ ಅವರು 'ಕಾವ್ಯ' ಎಂದೇ ಕರೆಯುತ್ತಾರೆ. ಏಕೆಂದರೆ ಇದರಲ್ಲಿ ಇರುವುದು ಕಾವ್ಯದ ಧಾಟಿಯೇ ಆಗಿರುವುದರಿಂದ. ಇದು ಪ್ರಕಟ ಆದದ್ದು ೧೯೬೭ ರಲ್ಲಿ.

**ಪ್ರಪಂಚದ ಬಾಲ್ಯದಲ್ಲಿ**

ಇದು ಜಾನಪದ ಕತೆಗಳ ಸಂಕಲನ. ಭಾರತಕ್ಕೆ ಆಗಮಿಸಿದ್ದ ವೆರಿಯರ್ ಎಲ್ವಿನ್ನನು ಈ ಕತೆಗಳನ್ನು ಸಂಗ್ರಹಿಸಿದ್ದನು. ಕೆ. ಎಸ್.ನ ಅವರು ''When the world was young'' ಎಂಬ ಶೀರ್ಷಿಕೆಯ ಅವನ ಇಂಗ್ಲಿಷ್ ಕೃತಿಯನ್ನು ''ಪ್ರಪಂಚದ ಬಾಲ್ಯದಲ್ಲಿ'' ಎಂಬುದಾಗಿ ಕನ್ನಡಕ್ಕೆ ತಂದಿದ್ದಾರೆ. ಮಾನವಶಾಸ್ತ್ರದ ಅಧ್ಯಯನದ ಹಿನ್ನೆಲೆಯಿಂದ ಬಹಳ ಮುಖ್ಯ ಅನ್ನಿಸುವ ಈ ಕೃತಿಯು ಪಂಚತಂತ್ರ, ಜಾತಕ ಕತೆಗಳನ್ನು ನೆನಪಿಗೆ ತರುತ್ತದೆ. ಇದು ಪ್ರಕಟ ಆದದ್ದು ೧೯೬೫ರಲ್ಲಿ.

**ಪತ್ರಗುಚ್ಛ**

ಇದು ಮಾಜಿ ಪ್ರಧಾನಿ ಜವಾಹರಲಾಲ್ ನೆಹರು ಅವರು ಬರೆದ ಪತ್ರಗಳ ಸಂಕಲನ. ಒಟ್ಟು ೩೬೮ ಪತ್ರಗಳು ಇದರಲ್ಲಿ ಇವೆ. ೭೦೦ ಪುಟಗಳ ಈ ಪುಸ್ತಕವು ಕನ್ನಡದಲ್ಲಿ ಪ್ರಕಟ ಆದದ್ದು ೧೯೭೫ ರಲ್ಲಿ. ನೆಹರು ಅವರ ಈ ಪತ್ರಗಳು ಕನ್ನಡಕ್ಕೆ ಉತ್ತಮವಾಗಿ ತರ್ಜುಮೆ ಆಗಿರುವುದು ಕೆ. ಎಸ್. ನ ಅವರಿಂದಲೇ.

**ನನ್ನ ಕನಸಿನ ಭಾರತ**

''India of my dreams'' ಎಂಬ ಮೂಲ ಇಂಗ್ಲಿಷ್ ಕೃತಿಯ ಸಂಪಾದಕರು ಆರ್. ಕೆ. ಪ್ರಭು ಅವರು. ಈ ಕೃತಿಯು ಗಾಂಧಿ ಅವರ ಲೇಖನಗಳ ಹಾಗೂ ಭಾಷಣಗಳ ಸಂಗ್ರಹ. ನರಸಿಂಹಸ್ವಾಮಿ ಅವರು ಇದನ್ನು ''ನನ್ನ ಕನಸಿನ ಭಾರತ'' ಎಂಬ ಶೀರ್ಷಿಕೆಯಡಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಇದು ಪ್ರಕಟ ಆದದ್ದು ೧೯೬೧ರಲ್ಲಿ.

**ಮೋಹನ ಮಾಲೆ**

ಇದು ಗಾಂಧಿ ಅವರ ಸುಭಾಷಿತಗಳ ಒಟ್ಟು ಕನ್ನಡಾನುವಾದದ ಸಂಗ್ರಹ. ೧೯೫೬ರಲ್ಲಿ ಕೆ. ಎಸ್. ನರಸಿಂಹಸ್ವಾಮಿಯವರು ಇದನ್ನು 'ಮೋಹನ ಮಾಲೆ' ಹೆಸರಿನಲ್ಲಿ ಕನ್ನಡಕ್ಕೆ ತಂದಿದ್ದಾರೆ. ಇದರಿಂದ ಕನ್ನಡಿಗರಿಗೆ ಗಾಂಧಿ ಅವರ ಸುಭಾಷಿತಗಳು ಕನ್ನಡದಲ್ಲೇ ದೊರೆಯುವಂತಾಯಿತು.

**ಸುಬ್ರಹ್ಮಣ್ಯ ಭಾರತಿ**

ಶ್ರೀಮತಿ ಪ್ರೇಮ ನಂದಕುಮಾರ್ ಅವರು ಇಂಗ್ಲಿಷಿನಲ್ಲಿ ಬರೆದಂಥ ಕೃತಿಯೇ ಸುಬ್ರಹ್ಮಣ್ಯ ಭಾರತಿ. ರಾಷ್ಟ್ರೀಯ ಜೀವನ ಚರಿತ್ರೆ ಮಾಲಿಕೆಯಲ್ಲಿ ಇದು ಪ್ರಕಟ ಆಗಿತ್ತು. ಸ್ವಾತಂತ್ರ್ಯ ಸಂಗ್ರಾಮದ ಚಿತ್ರಣವಿರುವ ಈ ಕೃತಿಯನ್ನು ೧೯೭೧ ರಲ್ಲಿ ಕೆ. ಎಸ್. ನ ಅವರು ಕನ್ನಡಕ್ಕೆ ತಂದಿದ್ದಾರೆ.

ಇವಲ್ಲದೆ 'ರಾಣಿಯ ಗಿಳಿ ಮತ್ತು ರಾಜನ ಮಂಗ' ಹಾಗೂ 'ಮಾಯಾ ಶಂಖ ಮತ್ತು ಇತರ ಕಥೆಗಳು' ಎಂಬ ಈ ಎರಡು ಕೃತಿಗಳನ್ನು ೧೯೭೨ ರಲ್ಲಿ ಕನ್ನಡಿಸಿದ್ದಾರೆ.

ಈ ಎರಡೂ ಕೃತಿಗಳು ಐ. ಬಿ. ಎಚ್ ಪ್ರಕಾಶನದ ಮಕ್ಕಳ ಪುಸ್ತಕ ಮಾಲೆಯಲ್ಲಿ ಪ್ರಕಟ ಆಗಿವೆ.

'ರಾಣಿಯ ಗಿಳಿ ಮತ್ತು ರಾಜನ ಮಂಗ' ಕೃತಿಯ ಮೂಲ ಲೇಖಕರು ಹರೀಂದ್ರನಾಥ ಚಟ್ಟೋಪಾಧ್ಯಾಯ ಅವರು. ಇದನ್ನು ಸಣ್ಣ ಮಕ್ಕಳಿಗಾಗಿ ಗೀತೆಗಳ ರೂಪದಲ್ಲಿ ಹೇಳಲಾಗಿದೆ. ಈ ಚಿಕ್ಕ ಕೃತಿಯಲ್ಲಿ ಒಟ್ಟು ಹತ್ತು ಕತೆಗಳು ಇವೆ. ಇದನ್ನು ಕೆ. ಎಸ್. ನ ಅವರು ಕನ್ನಡಕ್ಕೆ ಉತ್ತಮವಾಗಿ ಭಾಷಾಂತರಿಸಿದ್ದಾರೆ.

'ಮಾಯಾ ಶಂಖ ಮತ್ತು ಇತರ ಕಥೆಗಳು' ಕೃತಿಯ ಮೂಲ ಲೇಖಕರು ಜ್ಞಾನ್ ದೊರೈರಾಜ್ ಅವರು. ಒಟ್ಟು ಹನ್ನೊಂದು ಕತೆಗಳಿರುವ ಈ ಕೃತಿ ಜಾನಪದೀಯವಾದುದು. ಮಾನವನ ಜಾಣತನ, ಮೋಸ, ದುರಾಸೆ, ಅಸೂಯೆ ಮೊದಲಾದ ಗುಣಗಳನ್ನು ಇದರಲ್ಲಿ ಅಭಿವ್ಯಕ್ತಿಸಲಾಗಿದೆ. ಇದು ಕೆ. ಎಸ್.ನ ಅವರಿಂದ ಯಶಸ್ವಿಯಾಗಿ ಕನ್ನಡೀಕರಣಗೊಂಡಿದೆ.

ಬರ್ನ್ಸ್, ವರ್ಡ್ಸ್‌ವರ್ತ್. ಲ್ಯಾಂಡರ್, ಬೈರನ್, ಬ್ಲೇಕ್ ಮೊದಲಾದವರ ಕವಿತೆಗಳನ್ನು ಕೆ. ಎಸ್. ನ ಕನ್ನಡಕ್ಕೆ ತಂದಿದ್ದಾರೆ. ಅದೇ ರೀತಿ ೧೯೭೧ ರಲ್ಲಿ ಪುಷ್ಕಿನ್ನನ ಕಾವ್ಯದ ಕನ್ನಡಾನುವಾದ ಪ್ರಕಟ ಆಯಿತು. ಪುಷ್ಕಿನ್ನನ 'I loved you once' ('ನಾನೊಮ್ಮೆ ಪ್ರೀತಿಸಿದೆ ನಿನ್ನ') ಎಂಬ ಕವಿತೆಯ ಅನುವಾದ ಸೊಗಸಾಗಿ ಮೂಡಿ ಬಂದಿದೆ.

ಹೀಗೆ ಕೆ. ಎಸ್. ನ ಅವರು ಒಟ್ಟು ಒಂಭತ್ತು ಕೃತಿಗಳನ್ನು ಅನುವಾದ ಮಾಡಿದ್ದಾರೆ.

# ವಿಮರ್ಶೆಗಳ ಸಮೀಕ್ಷೆ

ಕೆ. ಎಸ್. ನ ಅವರ ಹದಿಹರೆಯದ ನವದಂಪತಿಗಳ ಭಾವನೆಗಳನ್ನೊಳಗೊಂಡ ಕವಿತೆಗಳ ಲೋಕ ಅನನ್ಯವಾದುದು. ಪ್ರೇಮ (ಒಲವು) ಮತ್ತು ದಾಂಪತ್ಯದ ವಸ್ತುವನ್ನು ಕೇಂದ್ರವನ್ನಾಗಿ ಇಟ್ಟುಕೊಂಡು ಕವಿತೆಗಳನ್ನು ರಚಿಸಿದ್ದರಿಂದ 'ಒಲವಿನ ಕವಿ' ಯಾಗಿ ಉಳಿದಿದ್ದಾರೆ. ತಮ್ಮವು 'ದಾಂಪತ್ಯಗೀತೆ'ಗಳೇ ವಿನಃ 'ಪ್ರೇಮಗೀತೆ'ಗಳಲ್ಲ ಎಂಬುದು ಕವಿಯ ವಾದ. ಮದುವೆಯಾದ ಅನಂತರ ಬರೆದಂಥ ಕವನಗಳೇ 'ಮೈಸೂರ ಮಲ್ಲಿಗೆ'ಯ ಸಂಗ್ರಹ. ಈ ಹಿನ್ನೆಲೆಯಲ್ಲಿಯೇ ವಿಮರ್ಶಕ ಗಿರಡ್ಡಿ ಗೋವಿಂದರಾಜ ಅವರು ಕೆ. ಎಸ್. ನ ಅವರನ್ನು 'ದಾಂಪತ್ಯ ಕವಿ' ಎಂದೇ ಗುರುತಿಸಿರುವುದು. ಆಗ ತಾನೆ ಮದುವೆಯಾಗಿ ಮಾವನ ಮನೆಯಲ್ಲಿ ಅನುಭವಿಸಿದ ಬದುಕಿನ ವಿವಿಧ ಮಗ್ಗುಲುಗಳು ಇವರ ಕಾವ್ಯದಲ್ಲಿ ಅಭಿವ್ಯಕ್ತಗೊಂಡಿವೆ. ಭಾವನೆಗಳ ಅಥವಾ ಕಲ್ಪನೆಗಳ ಜಗತ್ತಿನಲ್ಲಿ ಕವಿ ಓಡಾಡುವುದಿಲ್ಲ. ಬದಲಾಗಿ ಬಡಮಧ್ಯಮ ವರ್ಗದ ಸಹಜ ತುಡಿತಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಬಹುಶಃ ಇಂಥ ಸಹಜ ಜೀವನ ಚಿತ್ರಣವೇ ಅವರನ್ನು ಬಹು ಬೇಗ ಜನರ ಬಳಿಗೆ ಕರೆದುಕೊಂಡು ಹೋಯಿತು ಅನ್ನಿಸುತ್ತದೆ. ತಮ್ಮ ವೈಯಕ್ತಿಕ ಬದುಕನ್ನು ಕಾವ್ಯದ ನೆಲೆಗಳಲ್ಲಿ ಸಂರಚನೆ (construct) ಮಾಡಿದ್ದು ಕೆ. ಎಸ್. ನ ಅವರ ಕಾವ್ಯದ ವಿಶೇಷತೆಗಳಲ್ಲಿ ಒಂದು. ಹಾಗಾಗಿ ಡಿ. ಎಲ್. ನರಸಿಂಹಚಾರ್ ಅವರು 'ಮೈಸೂರ ಮಲ್ಲಿಗೆ' ಯನ್ನು ಕುರಿತಂತೆ:

> ''ಅದು ಮುಗ್ಧ ಪ್ರಣಯಿಗಳ ಸರಸ-ಸಲ್ಲಾಪಗಳ, ವಿರಹ ವೇದನೆಗಳ, ಎಳೆ ಹರೆಯದ ಪತಿ ಪತ್ನಿಯರ ಸಕ್ಕರೆಯನ್ನ ಸವಿಗನಸುಗಳ, ಪ್ರಣಯದ ಫಲವಾದ ಪುಟ್ಟ ಕಂದನ ಆಟಪಾಟಗಳ ಹೃದಯಂಗಮಚಿತ್ರಣ'' - ಎಂಬುದಾಗಿ ಬಣ್ಣಿಸಿದ್ದಾರೆ.

ಹೊಸಗನ್ನಡದಲ್ಲಿ 'ಪ್ರಣಯ' ವನ್ನೇ ಪ್ರಧಾನ ವಸ್ತುವನ್ನಾಗಿಸಿಕೊಂಡು ಬರೆದಂಥ ಕವಿಗಳಲ್ಲಿ ತೀ. ನಂ. ಶ್ರೀ ಮೊದಲಿಗರು. ಅವರ 'ಒಲುಮೆ' ಕವನ ಸಂಕಲನದಲ್ಲಿ ಅಂಥ ಕವಿತೆಗಳಿವೆ. ಆದರೆ ಕೆ.ಎಸ್.ನ ಅವರ ಪ್ರಣಯದ ಕವಿತೆಗಳು ಜಾನಪದೀಯ ಎಂದು ಭಾಸವಾದರೂ ವಾಸ್ತವದಲ್ಲಿ ಅಲ್ಲ. ಗಂಡು ಹೆಣ್ಣುಗಳ ಭಾವನೆಗಳು, ಸಂಬಂಧಗಳು ಸಹಜವಾಗಿ ಎಷ್ಟು ಮೂಡಿಬರಲು ಸಾಧ್ಯವೋ ಅಷ್ಟನ್ನು ಮಾತ್ರ ಇವರ ಕವಿತೆಗಳು ಅಭಿವ್ಯಕ್ತಿಸುತ್ತವೆ. ಯಾವುದೇ ವೈಭವೀಕರಣಕ್ಕೂ, ಆದರ್ಶೀಕರಣಕ್ಕೂ ಕವಿ ಆಸ್ಪದ ಕೊಡುವುದಿಲ್ಲ.

ಕೆ.ಎಸ್.ನ ಅವರ 'ಮೈಸೂರ ಮಲ್ಲಿಗೆ'ಯಲ್ಲಿನ ಹದಿಹರೆಯದವರ ಭಾವನೆಗಳನ್ನು ಕುರಿತಂತೆ ಬೇಂದ್ರೆ ಅವರು :

''ಮೈಸೂರು ಮಲ್ಲಿಗೆಯನ್ನು ತಂಗಾಳಿಗೊಡ್ಡಿದ ನರಸಿಂಹಸ್ವಾಮಿಯವರ ಪ್ರತಿಭೆ ಅಪ್ಸರೆಯಂತೆ. ಈ ಲಾವಣ್ಯವು ಮಣ್ಣು ನೆಲದಿಂದ ಬಂದುದಲ್ಲ ಎನಿಸಿಬಿಟ್ಟಿದೆ. ಕವಿಯ ಸ್ವಾಭಾವಿಕ ಸುಕುಮಾರ ಸಂವೇದನೆ ಇಲ್ಲಿ ಕಾವ್ಯ ಸೌಂದರ್ಯವಾಗಿ ಅರಳಿರುವುದೊಂದು ಸೋಜಿಗ. ಕನ್ನಡದಲ್ಲಿ ಪ್ರಣಯವೊಂದನ್ನೇ ಪ್ರಮುಖ ವಸ್ತುವಾಗಿ ಸ್ವೀಕರಿಸಿ ಗೆದ್ದ ಕವಿ ಕೆ. ಎಸ್. ನ ಅವರೊಬ್ಬರೇ. ಅನಂತ ಮುಖವಾದ ಪ್ರಣಯ ಸತ್ವಪೂರ್ಣ ಹಿನ್ನೆಲೆಯಲ್ಲಿ ಹಲವು ಹತ್ತು ಬಗೆಯ ಲೋಕವನ್ನು ಸೃಷ್ಟಿಸಿದೆ. ಮೈಸೂರು ಮಲ್ಲಿಗೆಯ ತರುಣ ದಂಪತಿಗಳು ಗಂಧರ್ವರು. ಎಲ್ಲ ಕಾಲದ, ಎಲ್ಲ ಬದುಕಿನ ಸಂತೋಷ ಕಣ್ಣಲ್ಲಿ ತುಂಬಿಕೊಂಡು, ಗಂಡು ಹೆಣ್ಣಿನ ಜೋಡಿಗಳು ಕಣ್ಣೆದುರಿಗೆ ಹಾದು ಹೋಗುತ್ತಾರೆ'' ಎಂದಿದ್ದಾರೆ.

ಹೊಸದಾಗಿ ಮದುವೆಯಾದ ದಂಪತಿಗಳು ಹೇಗಿರಬಹುದು ಎಂಬುದಕ್ಕೆ ಕೆ.ಎಸ್.ನ ಅವರ ಕವಿತೆಗಳು ಉತ್ತರ ಕೊಡುತ್ತವೆ. ಆ ದಿನಗಳಲ್ಲಿನ ಉತ್ಸಾಹ, ಸಂಭ್ರಮ, ನಾಚಿಕೆ, ಕಾತರತೆ, ಮುನಿಸು, ಕಣ್ಣುಗಳಲ್ಲಿನ ಬಯಕೆಗಳು, ಇನ್ನೇನನ್ನೋ ಹೇಳುವ ತವಕ, ಇವೆಲ್ಲವೂ ಇವರ ಕವಿತೆಗಳಲ್ಲೇ ಅಲ್ಲದೆ ಒಟ್ಟು ಕನ್ನಡ ಕಾವ್ಯಕ್ಕೆ ಹೊಸ 'ರೂಪ'ವನ್ನು ಕೊಟ್ಟಂಥವು.

'ನಮ್ಮೂರು ಚೆಂದವೋ, ನಿಮ್ಮೂರು ಚೆಂದವೋ' ಎಂದು ಕೇಳುತ್ತಾ 'ನವಿಲೂರಿನೊಳಗೆಲ್ಲ ನೀನೆ ಬಲು ಚೆಲುವೆ' ಎಂಬುದಾಗಿ ಛೇಡಿಸುವುದರ ಮೂಲಕ ಹೊಗಳುತ್ತಾರೆ ಕವಿ, ತನ್ನ ನವ ವಧುವನ್ನು. ಅಲ್ಲದೆ 'ನನ್ನವಳು ನನ್ನೆದೆಯ ಹೊನ್ನಾಡುವನ್ನಾಳುವವಳು' ಎನ್ನುವುದರ ಮೂಲಕ ಅವಳಿಗೆ ಒಂದು ಸ್ಥಾನವನ್ನು ಕಾಯ್ದಿರಿಸುತ್ತಾರೆ. ಅಂತೆಯೇ ಹೆಂಡತಿಯು ಗಂಡನನ್ನು ನೋಡುವ ನೋಟವು ಸುಂದರವಾಗಿ ಮೂಡಿಬಂದಿರುವುದು 'ಮೈಸೂರ ಮಲ್ಲಿಗೆ'ಯಲ್ಲಿಯೇ. ಒಂದು ತಿಂಗಳವರೆವಿಗೂ ಬರುವುದಿಲ್ಲ ಎಂದು ಹೇಳಿ ಹೊರಟಂಥ ಗಂಡನು ರೈಲ್ವೆ ನಿಲ್ದಾಣದಲ್ಲಿ ಬಂಡಿಯನ್ನು ತಪ್ಪಿಸಿಕೊಂಡು ಮತ್ತೆ ಮನೆಗೆ ಹಿಂತಿರುಗುತ್ತಾನೆ. ಆಗ ಆಕೆ ಕೊಂಕಿನಿಂದ ಕೇಳುವ 'ತಿಂಗಳಾಯಿತೆ?' ಎಂಬ ಕವನ ಸೊಗಸಾಗಿದೆ. ಗಂಡ ಮಾವನ ಮನೆಗೆ ಬಂದಾಗ ಹೆಂಡತಿ 'ಪದುಮ' ಮನೆಯಲ್ಲಿ ಕಾಣುವುದಿಲ್ಲ. ಪೇಚಾಡುವ ಗಂಡನನ್ನು ಕಂಡು ಹೇಳುವ 'ರಾಯರು ಬಂದರು ಮಾವನ ಮನೆಗೆ' ಎಂಬ ಕವನ ತನ್ನದೇ ಆದ ಸತ್ವವನ್ನು ಹಿಡಿದಿಟ್ಟುಕೊಂಡಿದೆ.

ಹೆಂಡತಿ ತೌರುಮನೆಗೆ ಹೋದಾಗ ಇಬ್ಬರೂ ತಾಳುವ ವಿರಹ ವೇದನೆಯನ್ನು ನವುರಾಗಿ ಚಿತ್ರಿಸುತ್ತಾರೆ ಕೆ. ಎಸ್. ನ. ಬಳೆಗಾರ ಚೆನ್ನಯ್ಯ ತೌರೂರಿನಲ್ಲಿರುವ ಹೆಂಡತಿಯನ್ನು ಕುರಿತಂತೆ ನೀಡುವ ಚಿತ್ರಣ ಹಾಗೂ ಆ ಧಾಟಿ ಗಮನ ಸೆಳೆಯುತ್ತದೆ. ಮಾವನ ಮೇಲಿನ ಸಿಟ್ಟನ್ನು ಪಕ್ಕಕ್ಕಿಟ್ಟು ಆಕೆಯನ್ನು (ಹೆಂಡತಿ) ಒಮ್ಮೆ ನೋಡಿಕೊಂಡು

ಬರಲು ನೀಡುವ ಸಲಹೆ ಮನಮುಟ್ಟದೆ ಇರಲಾರದು. ಇಂಥ ಸಹಜ-ಸರಳ ವಿಷಯಗಳೂ ಸಹ ಕೆ. ಎಸ್.ನ ಅವರ ಕಾವ್ಯದಲ್ಲಿ ಅಸಾಧಾರಣ ರೂಪ ಪಡೆಯುತ್ತವೆ.

ಮದುವೆ ಆದ ಮಗಳ ಅಗಲಿಕೆಯನ್ನು ತಾಳಲಾರದ ಮಾವನನ್ನು ಕುರಿತು ಅಳಿಯನಾದವನು ಸಂತೈಸುವ ಧಾಟಿ ಹೊಸ ರೀತಿಯದು.ಆತ

‘ಒಬ್ಬಳೇ ಮಗಳೆಂದು ನೀವೇಕೆ ಕೊರಗುವಿರಿ
ಒಬ್ಬಳೇ ಮಡದಿಯೆನಗೆ!’

ಎನ್ನುವಾಗ ಅದು ಎಲ್ಲ ರೀತಿಯ ಧೈರ್ಯವನ್ನು ತುಂಬುವಂಥದ್ದು. ಕವಿಯು ತನ್ನ ಕವಿತೆಗಳಲ್ಲಿ ಕಟ್ಟಿಕೊಡುವ ಭಾರತೀಯ ಹೆಣ್ಣು ಮಗಳ ಹಾಗೂ ಗ್ರಾಮೀಣ ಪರಿಸರದ ಚಿತ್ರಣ ಸುಂದರ. ಬೃಂದಾವನದ ತುಳಸಿ ಪೂಜೆ, ತಲೆತುಂಬ ಹೂವು, ಕುಂಕುಮ, ಹಸಿರು ಕುಪ್ಪಸ, ಬಳೆಗಳು, ಬಾವಿಯಿಂದ ನೀರು, ಬಂಡಿಯ ದಾರಿ, ಸಂತೆಯಲ್ಲಿನ ಹೆಣ್ಣುಮಕ್ಕಳು, ಹೂವಾಡಗಿತ್ತಿ, ತಲೆದೂಗುವ ತೆಂಗು-ಬಾಳೆಗಳು ಇವೆಲ್ಲವೂ ಇಂದಿಗೂ ನಮ್ಮ ಗ್ರಾಮೀಣ ಪರಿಸರ ಹಾಗೂ ಹೆಣ್ಣು ಮಕ್ಕಳ ಪ್ರತಿಬಿಂಬ. ಇವರ ಕಾವ್ಯದಲ್ಲಿ ಬರುವಂಥ ಪದುಮ, ಜಾನಕಿ, ಮೀನಾಕ್ಷಿ, ಗೌರಿ, ಸೀತಾದೇವಿ, ಚಂದಮ್ಮ ಮೊದಲಾದ ಹೆಸರುಗಳೂ ಸಹ ಪಾತ್ರಗಳಿಗೆ ಸರಿಯಾಗಿ ಒಪ್ಪುವಂಥವು. ಹೊನ್ನೂರು, ನವಿಲೂರು, ತಾವರೆಗೆರೆ, ಸಿರಿಗೆರೆ, ಚಿತ್ರವಳ್ಳಿ ಮೊದಲಾದ ಊರುಗಳು ಕವಿಯ ಕಲ್ಪನೆಗಳಲ್ಲ. ನೈಜವಾದವು. ನವಿಲೂರು-ಹೊನ್ನೂರುಗಳ ಬಗ್ಗೆ ಕವಿಯನ್ನು ಕುತೂಹಲಕ್ಕಾಗಿ ಕೇಳಲಾಯಿತು. ಅದಕ್ಕೆ ಅವರು ಕೊಟ್ಟ ಉತ್ತರ, ‘‘ಅವು ಇಂದಿಗೂ ಇರುವ ಊರುಗಳೇ ಆದರೂ ನನ್ನ ಕವಿತೆಗಳಲ್ಲಿ ಇರುವಂತೆ ಅಕ್ಕ ಪಕ್ಕದ ಊರುಗಳಲ್ಲ’’ ಎಂಬುದಾಗಿತ್ತು.

‘ಮಾವನ ಮನೆಯಲ್ಲಿ’, ‘ಒಬ್ಬಳೇ ಮಗಳು’ ‘ಶ್ಯಾನುಭೋಗರ ಮಗಳು’ ಮೊದಲಾದ ಕವನಗಳು ಸಹೃದಯರ ಗಮನ ಸೆಳೆಯುತ್ತವೆ. ಇವುಗಳಲ್ಲಿನ ಗೇಯತೆ ಹಾಗೂ ನವುರಾದ ಹಾಸ್ಯ ಜನರನ್ನು ಆಕರ್ಷಿಸಿತು. ಜನಸಾಮಾನ್ಯರ ಆಡುಭಾಷೆಯಿಂದಲೇ ಈ ಕವಿತೆಗಳನ್ನು ರಚಿಸಿರುವುದರಿಂದ ಇಂದಿಗೂ ಜನರ ಮಧ್ಯೆ ಉಳಿದಿವೆ. ಕೆ. ಎಸ್. ನ ಅವರ ಆರಂಭದ ಕವಿತೆಗಳಲ್ಲಿನ ಸಾಲುಗಳು ಗದ್ಯದ ಕಡೆಗೆ ಸೆಳೆಯುವುದಿಲ್ಲ’ ಅವು ಪದ್ಯಗಳಾಗಿಯೇ ಉಳಿಯುತ್ತವೆ. ಈ ಮಾತು ‘ಮೈಸೂರ ಮಲ್ಲಿಗೆ’ ಸಂಕಲನದ ಕವಿತೆಗಳಿಗೂ ಅನ್ವಯಿಸುತ್ತದೆ. ಉದಾಹರಣೆಗೆ

‘ನಿಮ್ಮ ನೆನಪೇ ನನ್ನ ಹಿಂಡುವುದು ಹಗಲಿನಲಿ
ಇರುಳಿನಲ್ಲಿ ಕಾಣುವುದು ನಿಮ್ಮ ಕನಸು’

‘ತೌರೂರ ದಾರಿಯಲಿ ತೆಂಗುಗಳ ತಲೆದೂಗಿ
ಬಾಳೆಗಳು ತೋಳ ಬೀಸಿ’

-ಮೊದಲಾದ ಸಾಲುಗಳನ್ನು ಗಮನಿಸಬಹುದು. ಕೆ.ಎಸ್. ನ ಅವರು ತಮ್ಮ ಕವನಗಳಲ್ಲಿ ಉಪಮಾನ ಕೊಡಲು ಪ್ರಯತ್ನಿಸದೆ ಇರಲಿಲ್ಲ. ಆದರೆ ಬಿ. ವಿ. ವೈಕುಂಠ ರಾಜು ಅವರು ಹೇಳುವಂತೆ ಅವು ‘‘ಯಶಸ್ವಿಯಾಗಲಿಲ್ಲ’’ ಅಷ್ಟೇ. ಇವರು-

''ಪ್ರಣಯವನ್ನು ಮಾತ್ರವೇ ವಸ್ತುವಾಗಿ ಇಟ್ಟುಕೊಂಡ ಇವರ ಕಾವ್ಯ ಕ್ಷೇತ್ರ ಕಿರಿದಾಯಿತು......ಇಲ್ಲಿಯ ಪ್ರೇಮ ಗೀತೆಗಳಲ್ಲಿ ಹೊಸತೇನೂ ಇಲ್ಲ'' ಎಂದೂ ಸಹ ಅಭಿಪ್ರಾಯಪಟ್ಟಿದ್ದಾರೆ. ಬಹುಶಃ ಈ ಹಿನ್ನಲೆಯಲ್ಲಿಯೇ ಕವಿ ಜಿ. ಎಸ್. ಶಿವರುದ್ರಪ್ಪ ಅವರು 'ಮೈಸೂರ ಮಲ್ಲಿಗೆ'ಯನ್ನು ಕುರಿತಂತೆ-

> ''ಈ ಕವಿತೆಗಳಲ್ಲಿ ಕಾಣುವ ಗಂಡ ಹೆಂಡಿರು ಬಹಳ ಸರಸಿಗಳು; ಬಹಳ ಒಳ್ಳೆಯವರು. ಅವರಿಗೆ ಅಂತಹ ತಾಪತ್ರಯಗಳೇನೂ ಇಲ್ಲ. ಹೀಗಾಗಿ ಸರಸ ದಾಂಪತ್ಯದ ಸಂತೋಷವಷ್ಟೇ ಪ್ರಧಾನವಾಗಿರುವುದು ಈ ಪ್ರಣಯ ಕವನಗಳಿಗಿರುವ ಒಂದು ಮಿತಿ. ಎಷ್ಟೋ ಕವಿತೆಗಳು ಹೆಚ್ಚು ಆಳವಿಲ್ಲದ, ಸೊಗಸಾದ ಚಿತ್ರಗಳು ಮಾತ್ರ. ಇವರ ಕವನಗಳಲ್ಲಿ ಪ್ರಣಯ ತತ್ವ (Love's Philosophy) ವಾಗಲಿ, ಸಾಂಸಾರಿಕ ಜೀವನದಲ್ಲಿನ ಸಂಘರ್ಷಗಳಾಗಲಿ, ನೋವು ಸಂಕಟವಾಗಲಿ ಬಂದಿಲ್ಲ''- ಎನ್ನುವುದರ ಮೂಲಕ ಮಿತಿಗಳನ್ನು ಗುರುತಿಸುತ್ತಾರೆ.

ನವೋದಯ ಮತ್ತು ನವ್ಯ ಸಂಪ್ರದಾಯಗಳಿಗೆ ಕೆ. ಎಸ್. ನರಸಿಂಹಸ್ವಾಮಿ ಮತ್ತು ಗೋಪಾಲಕೃಷ್ಣ ಅಡಿಗರು ತಮ್ಮ ನಿಷ್ಠೆ ವ್ಯಕ್ತಪಡಿಸಿದ್ದಾರೆ. ಅಂದರೆ ಇವರ ಆರಂಭದ ಕವಿತೆಗಳಲ್ಲಿ 'ಪ್ರಾಸ'ವನ್ನು ಬಿಡಲು ಒಪ್ಪಿದವರಲ್ಲ. ಛಂದಸ್ಸಿನ ದೃಷ್ಟಿಯಿಂದ ಹೆಚ್ಚು ಗಮನ ಸೆಳೆಯುವವರು ಕೆ. ಎಸ್. ನ. ಇಂದು ಪ್ರಕಟ ಆಗುತ್ತಿರುವ ಸಾಹಿತ್ಯ ಪಂಥಗಳ ನೆಪದಲ್ಲಿನ ಕವನಗಳ ಬಗ್ಗೆ ಕವಿಗೆ ಸಮಾಧಾನ ಇಲ್ಲ. ಇತರರಿಗಾಗಿ ಅಥವಾ ಒತ್ತಡಗಳಿಗಾಗಿ ಕವಿ ಕಾವ್ಯವನ್ನು ರಚಿಸಬಾರದು ಎಂಬ ನಿಲುವನ್ನು ಹೊಂದಿರುವವರು ಕೆ. ಎಸ್. ನ. ಛಂದಸ್ಸಿಲ್ಲದ ಕಾವ್ಯವನ್ನು ಕೆ. ಎಸ್. ನ ಒಪ್ಪಿಕೊಳ್ಳುವುದಿಲ್ಲ. ಆದ್ದರಿಂದಲೇ ಅವರು 'ಮೈಸೂರ ಮಲ್ಲಿಗೆ'ಯಲ್ಲಿ ಗೇಯತೆ ಮತ್ತು ಛಂದಸ್ಸಿಗೆ ಗಮನ ಹರಿಸಿರುವುದು. ಅಡಿಗರೂ ಸಹ ಈ ಥರದ ಮನೋಭಾವದವರೇ. ಆದ್ದರಿಂದಲೇ ಜಿ.ಎಸ್. ಎಸ್ ಅವರು ಇವರೀರ್ವರನ್ನು ಕುರಿತಂತೆ-

> ''ನವ್ಯಕಾವ್ಯದ ಛಂದಸ್ಸಿನ ದೃಷ್ಟಿಯಿಂದಲೂ ಇವರ ಪ್ರಯತ್ನಗಳೇ ಹೆಚ್ಚು ಪ್ರಮುಖವಾಗಿರುವುದನ್ನು ಅಲ್ಲಗಳೆಯಲಾಗುವುದಿಲ್ಲ'' ಎಂದು ಹೇಳಿರುವುದು.

ಕೆ. ಎಸ್. ನ ಅವರು ತಮ್ಮ ಮೊದಲ ಸಂಕಲನದಲ್ಲಿ 'ಸುಕೋಮಲ' ಅಥವಾ 'ಸುಕುಮಾರ' ಜಗತ್ತನ್ನು ಮಾತ್ರ ಕಟ್ಟಿಕೊಡುತ್ತಾರೆ. ಸಮಾಜದೊಂದಿಗಿನ ಅವರ ಸಂಪರ್ಕ ಕಾವ್ಯದಲ್ಲಿ ಅಭಿವ್ಯಕ್ತ ಆಗಿಲ್ಲ ಎನ್ನಲಾಗುತ್ತದೆ. ಅದರೆ ವಾಸ್ತವದಲ್ಲಿ ಕವಿಗೆ ಅಭಿವ್ಯಕ್ತಿಸಬೇಕಿದ್ದಿದ್ದು ಕೆಳ ಮಧ್ಯಮ ವರ್ಗದ 'ಒಲವ'ನ್ನು ಮಾತ್ರ. ನೋವು, ಕಠೋರತೆಗಳು ಇದ್ದದ್ದು ಸಹಜವೇ ಆದರೂ ಕೆ. ಎಸ್. ನ ಅವರಿಗೆ ಅದರಾಚೆಗಿನ ಬದುಕಿನ ಚೆಲುವು, ಸೊಗಸುಗಳು ಬೇಕಿತ್ತು. ಅದನ್ನು ಒಲವಿನ ಮೂಲಕ ಹೇಳುತ್ತಾರೆ. ಈ ಮೂಲಕ ಬೇರೆಲ್ಲವನ್ನು ಮರೆಯುವುದು ಕವಿಗೆ ಅಪೇಕ್ಷಣೀಯ ಆಗಿತ್ತು. ಈ ಎಲ್ಲವನ್ನೂ ಗಮನದಲ್ಲಿ ಇಟ್ಟುಕೊಂಡೇ ವಿಮರ್ಶಕ ಟಿ. ಪಿ. ಅಶೋಕ ಅವರು-

> "ಕೆ.ಎಸ್.ನ ಕಾವ್ಯ ಒಂದು ಕಾಲದ ಭಾರತೀಯ ಮಧ್ಯಮ ವರ್ಗದ ಸಂಪ್ರದಾಯ, ನಂಬಿಕೆ, ಮೌಲ್ಯನಿಷ್ಠೆಗಳನ್ನು ದಾಖಲು ಮಾಡುವುದರ ಮೂಲಕ ಕಣ್ಮರೆಯಾಗುತ್ತಿರುವ ಒಂದು ಸಂಸ್ಕೃತಿಯನ್ನೇ ಹಿಡಿದಿಟ್ಟು ಮುಖ್ಯವಾಗುತ್ತದೆ"

ಎಂದು ಅಭಿಪ್ರಾಯಪಟ್ಟಿರುವುದು. ಇದರ ಅರ್ಥ ಸಂಪ್ರದಾಯಕ್ಕೆ ಮಾರು ಹೋಗುವುದು ಎಂಬುದಲ್ಲ. ಇಲ್ಲಿ ಕಾವ್ಯವೆಂಬುದು ಒಂದು 'ಸಾಂಸ್ಕೃತಿಕ ದಾಖಲೆ' ಎನ್ನುವುದು ಮಾತ್ರ ಮುಖ್ಯ. ಈ ಎಲ್ಲ ಮಾತುಗಳ ಹಿನ್ನೆಲೆಯಲ್ಲಿ ಖ್ಯಾತ ವಿಮರ್ಶಕರಾದ ಕೀರ್ತಿನಾಥ ಕುರ್ತಕೋಟಿ ಅವರ ಕೆ. ಎಸ್.ನ ಕಾವ್ಯದ ಬಗೆಗಿನ ಅನ್ನಿಸಿಕೆ ಪ್ರಸ್ತುತ ಅನ್ನಿಸುತ್ತದೆ. ಅವರು "ಬದುಕಿನ ನಿರ್ಮಲವಾದ ಆನಂದ ಕೆ. ಎಸ್. ನ ಅವರ ಕಾವ್ಯ ಜೀವಾಳವಾಗಿ ಯಾವಾಗಲೂ ನಿಲ್ಲುತ್ತದೆ" ಎಂದಿದ್ದಾರೆ.

೧೯೪೨ರಲ್ಲಿ 'ಮೈಸೂರ ಮಲ್ಲಿಗೆ' ಪ್ರಕಟ ಆದ ಮೇಲೆ ೧೯೫೨ ರಲ್ಲಿ 'ಇರುವಂತಿಗೆ' ಸಂಕಲನ ಪ್ರಕಟ ಆಯಿತು. ಈ ನಡುವಣ ಹತ್ತು ವರುಷಗಳಲ್ಲಿ 'ಐರಾವತ' , 'ದೀಪದ ಮಲ್ಲಿ' ಹಾಗೂ 'ಉಂಗುರ' ಕವನ ಸಂಕಲನಗಳು ಪ್ರಕಟ ಆಗಿದ್ದವು. ಇವುಗಳಲ್ಲಿನ ಕವಿತೆಗಳು ಮತ್ತೆ ಹಿಂದಿನ ಸುಕುಮಾರ ಜಗತ್ತನ್ನೇ ನೆನಪಿಗೆ ತರುತ್ತವೆ. ಅಂದ ಮಾತ್ರಕ್ಕೆ ಕವಿಯಲ್ಲಿ ಹೊಸ ಬದಲಾವಣೆಗಳು ಕಾಣಲಿಲ್ಲ ಎಂಬುದು ಇದರರ್ಥವಲ್ಲ. ಕಾವ್ಯದ ಮೂಲಕ ತಮ್ಮದೇ ಆತ ತಾತ್ವಿಕ ನೆಲೆಗಟ್ಟನ್ನು ಕಟ್ಟಿಕೊಡುವ ಪ್ರಯತ್ನ ಕೆಲವು ಕವನಗಳಲ್ಲಿ ವ್ಯಕ್ತವಾಗಿದೆ. ಅದು ಪಕ್ವತೆಯ ಕಡೆಗೆ ಸಾಗುವ ಚಿಂತನೆಯ ಕುರುಹೂ ಹೌದು. ಅಂತಿಮ ರೂಪವನ್ನು ಕಂಡುಕೊಂಡದ್ದು ಮಾತ್ರ 'ಶಿಲಾಲತೆ'ಯಲ್ಲೇ. ಅದಕ್ಕೆ ಮುಂಚೆ 'ಇರುವಂತಿಗೆ' ವರೆಗಿನ ಕೆಲವು ಕವನಗಳನ್ನು ಇಲ್ಲಿ ಪರಾಮರ್ಶಿಸಬಹುದು ಅನ್ನಿಸುತ್ತದೆ.

'ಐರಾವತ'ದಲ್ಲಿನ 'ಹೆಂಡತಿಯೊಬ್ಬಳು', 'ನೀವಲ್ಲವೇ', 'ಅವಳೇ ಇವಳು' ಮೊದಲಾದ ಕವನಗಳು ' ಮೈಸೂರ ಮಲ್ಲಿಗೆ' ಯ ಕಂಪನ್ನು ನೆನಪು ಮಾಡುತ್ತವೆ. ಪ್ರತಿಯೊಬ್ಬರಿಗೂ ಬದುಕು ಅವರವರು ಕಂಡು ಕೊಳ್ಳುವ ನೋಟಗಳ ಮೂಲಕ ಅರಿವಿಗೆ ಬರುತ್ತದೆ. ಕೆ. ಎಸ್. ನ ಅವರು ತಾವು ಕಂಡು ಉಂಡಂಥ ಬದುಕನ್ನು ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸುತ್ತಾರೆ. ಇದು ಅವರ ಪ್ರಾಮಾಣಿಕ ಪ್ರಯತ್ನವಷ್ಟೇ. ಅಂಥ ಬದುಕಿನ ಒಂದು ಮಗ್ಗುಲನ್ನು ಕವಿ ತನ್ನ 'ಐರಾವತ' ಕವನದ-

> "ದುಃಖಮಯವೀ ಬದುಕು ಎನ್ನುವವ ಕವಿಯೇ?
> ಸುಖವೆಂಬುದಿಲ್ಲವೇ ದುಃಖದನುಭವಿಗೆ?
> ದುಃಖ ದಿನ ದಿನ ಬಂದು ಇರಿದಿರಿದು ಪೋಗೆ
> ಹರ್ಷ ವರ್ಷಕ್ಕೊಮ್ಮೆ ಇಣಿಕಿ ನೋಡೆ
> ಬದುಕಿಗೂ ಸಾವಿಗೂ ನಡುವೆ ನಿಂದು
> ಈ ಭೂಮಿ ಈ ಚೆಲುವು ನಮ್ಮದೆಂದು
> ಹೊತ್ತ ಹೊರೆ ಬಲು ಹಗುರವೆನ್ನದವ ಕವಿಯೆ?"

ಎಂಬ ಸಾಲುಗಳಲ್ಲಿ ಹಿಡಿದಿಡಲು ಪ್ರಯತ್ನಿಸಿದ್ದಾರೆ. ಕೆ.ಎಸ್.ನ ಅವರು ಬದುಕನ್ನು ಕಂಡುಕೊಂಡದ್ದು ಹೀಗೆ. ಇದು 'ಪಲಾಯನವಾದ' ಎಂದು ಪ್ರಶ್ನಿಸಿದವರೂ ಉಂಟು. ಅದಕ್ಕೆ ಜಿ. ಎಸ್. ಎಸ್. ಕೊಡುವ ಉತ್ತರ- ''ಹಾಗೆ ಕರೆಯುವುದು (ಪಲಾಯನವಾದ) ವಿಮರ್ಶೆಯ ಕುಹಕವಾದೀತು'' ಎಂಬುದಾಗಿ.

''ನೀವಲ್ಲವೇ?'' ಕವನದಲ್ಲಿ ಹೆಂಡತಿಯು ತನ್ನ ಗಂಡನೊಡನೆ ಅದುವರೆವಿಗೂ ಕಳೆದಂಥ ದಿನಗಳನ್ನು ನೆನಪು ಮಾಡಿಕೊಡುವ ನೋಟ ಇದೆ. ನವುರಾಗಿ ಗಂಡನ ಸ್ವಭಾವವನ್ನು ಲೇವಡಿ ಮಾಡುವ ತುಂಟತನ, ಜಾಣ್ಮೆಗಳು ಈ ಕವಿತೆಯಲ್ಲಿವೆ. ಮದುವೆ ಆಗುವುದಕ್ಕೂ ಹಿಂದೆ ನಡೆದ ಘಟನೆಗಳಿಂದ ಹೆಂಡತಿ ನೆನಪು ಮಾಡುತ್ತಾಳೆ. ಈ ಕವನದಲ್ಲಿ ಇಬ್ಬರ ನಡುವಿನ ಸಂಬಂಧ, ಅಕ್ಕರೆಗಳು ವ್ಯಕ್ತ ಆಗಿವೆ. 'ನೀವಲ್ಲವೇ' ಕವನವನ್ನು ಎಸ್. ಎಂ. ವೃಷಬೇಂದ್ರಸ್ವಾಮಿ ಅವರು 'ಸರ್ವಾಂಗ ಸುಂದರ ವಿಮರ್ಶೆ' ಮಾಡಿದ್ದಾರೆ. ಹೆಣ್ಣೊಬ್ಬಳು ತೌರುಮನೆಗೆ ಹೋಗಿ ಬರುವಷ್ಟರಲ್ಲಿ ಮನೆಯ ಸ್ಥಿತಿಗತಿಗಳು ಯಾವ ರೂಪ ಪಡೆದಿರಬಹುದು ಎಂಬುದನ್ನು 'ಮಂಗಳವೇ ಮನೆಗೆ ಈ ಪಾಡು' ಕವನದ ಸಾಲುಗಳು ಹೇಳುತ್ತವೆ.

'ದೀಪದ ಮಲ್ಲಿ' ಯಲ್ಲಿನ 'ಅರಸೀಕೆರೆಯಲ್ಲಿ', 'ಕಣ್ಣೆತ್ತಿ ನೋಡಿದಳು ಚಂದಿರನ ತನಕ', 'ನೀ ಬರುವ ದಾರಿಯಲಿ' ಮೊದಲಾದ ಕವನಗಳು ದಾಂಪತ್ಯ ಗೀತೆಗಳೇ ಆಗಿವೆ. ಅಲ್ಲದೆ 'ಅನ್ನಪೂರ್ಣೆ,' 'ದೇವರ ಹೆಜ್ಜೆ' ಯಂಥ ಬದುಕಿನ ನೋವು-ಕಠೋರತೆಗಳನ್ನು ಹೇಳುವ ಕವನಗಳೂ ಉಂಟು. ಆದ್ದರಿಂದಲೇ ಈ ಸಂಕಲನ ಸ್ವಲ್ಪ ಭಿನ್ನವಾಗುವುದು. ನಿರೂಪಣೆಯಲ್ಲೂ ಅಷ್ಟೇ.

'ಹೀಗಾಯಿತು' ಕವನದಲ್ಲಿ ಕವಿಯು ತಾನು ಇಲ್ಲದ ಹೊತ್ತಿನಲ್ಲಿ ಯಾರೋ ಬಂದು ವಿಚಾರಿಸಿಕೊಂಡು ಹೋದುದರ ಬಗ್ಗೆ ನಡೆಸುವ ಚಿಂತನೆ ವಿಮರ್ಶಕರ ಗಮನ ಸೆಳೆದಿದೆ. ಗಹನತೆಯ ಕಡೆಗೆ ಚಲಿಸುವ ಈ ಕವನ ಹೆಚ್ಚು ಸಾಂಕೇತಿಕವಾದುದು. 'ತುಂಗಭದ್ರೆ' ಮತ್ತು 'ಸಣ್ಣ ಸಂಗತಿ' ಕವಿತೆಗಳಲ್ಲೂ ಕವಿ ಇದೇ ಪ್ರಯತ್ನ ಮಾಡಿದ್ದಾರೆ.

ಎಚ್. ಎಸ್. ವೆಂಕಟೇಶ ಮೂರ್ತಿ ಅವರು 'ದೀಪದಮಲ್ಲಿ', 'ಇರುವಂತಿಗೆ' ಯಲ್ಲಿನ ಕವಿತೆಗಳ ಬಗ್ಗೆ ಬರೆಯುತ್ತಾ :

> '' 'ಮಲ್ಲೆ'ಯಲ್ಲಿ ಎಂಬ ಕಥನ ಧಾಟಿಯ ಕವಿತೆ ಬಿ. ಎಂ. ಶ್ರೀ ಅವರ 'ಕಾರ ಹೆಗ್ಗಡೆಯ ಮಗಳ'ನ್ನು ನೆನಪಿಸಿದರೆ, ಅನ್ನದ್ ತಪ್ಲೆ, ನನ್ನ ಲಚ್ಮಿ ಜಿ. ಪಿ. ರಾಜರತ್ನಂ ಅವರ ರತ್ನನ ಪದಗಳ ನೆನಪು ತರುತ್ತದೆ'' ಎಂದು ಅಭಿಪ್ರಾಯ ಪಟ್ಟಿದ್ದಾರೆ.

'ಶಿಲಾಲತೆ' ಸಂಕಲನದ 'ಬರಿಗೊಡಗಳಿಗೆ ಸಮಾಧಾನ', 'ಕೇಳುವವರಿಲ್ಲದ ಮಗು', 'ಗಾಂಧಿಸ್ತವನ', 'ಸಂಭವಾಮಿ ಯುಗೇ ಯುಗೇ', ' ಕಾವಲುಗಾರ' ಮೊದಲಾದ ಕವಿತೆಗಳಲ್ಲಿ ಕೆ. ಎಸ್.ನ ಅವರ ಹೊಸ ಪ್ರಯತ್ನಗಳು ಇವೆ. ಅಂದರೆ ಈ

ಕವಿತೆಗಳಲ್ಲಿ ಸಾಮಾಜಿಕ ಸಮಸ್ಯೆಗಳನ್ನು ಪ್ರಸ್ತಾಪಿಸಲು ಆರಂಭಿಸಿದ್ದನ್ನು ಗಮನಿಸಬಹುದು.

ಸ್ವಾತಂತ್ರ್ಯ ಹೋರಾಟದ ಬಿಸಿ, ಭಾರತ ಸ್ವತಂತ್ರಗೊಂಡ ಸಂದರ್ಭ -ಇಂಥ ಸನ್ನಿವೇಶಗಳಲ್ಲಿ ಹುಟ್ಟಿಕೊಂಡದ್ದು 'ಉಂಗುರ'ದ ಕವಿತೆಗಳು. ಇದು ಒಂದು ರೀತಿಯ ಸಂಧಿಕಾಲವೂ ಹೌದು. ಸಮಕಾಲೀನ ಪರಿಸ್ಥಿತಿಗಳು ಅವರನ್ನು ಪ್ರಭಾವಿತರನ್ನಾಗಿಸಿದ್ದವು ಎಂಬುದಕ್ಕೆ ಕೆಲವು ಕವನಗಳು ಕುರುಹುಗಳನ್ನು ನೀಡುತ್ತವೆ. 'ಡೊಮಿನಿಯನ್ ಜನನ,' 'ಗಾಂಧೀಜಿಯ ಪಾದಕ್ಕೆ ', 'ಮಾತು ಬೇಸರವಾಗಿದೆ' 'ಇದೇ ಸಾಕು' ಮೊದಲಾದುವುಗಳಲ್ಲಿ ಅಂದಿನ ಸ್ಥಿತಿಗತಿಗಳಿಗೆ ಪ್ರತಿಕ್ರಿಯಿಸಿದ್ದಾರೆ. ಇವುಗಳಲ್ಲಿ ಕವಿಯ ಮನೋಸಂದಿಗ್ಧತೆ ವ್ಯಕ್ತ ಆಗಿದೆ.

ಕವಿ ಚೆನ್ನವೀರ ಕಣವಿ ಅವರು ಕೆ. ಎಸ್. ನ ಅವರ ಪ್ರೇಮ ಅಥವಾ ದಾಂಪತ್ಯ ಗೀತೆಗಳ ಜೊತೆಗೆ ' ವಾತ್ಸಲ್ಯ ಗೀತೆ'ಗಳನ್ನು ಗುರುತಿಸಿದ್ದಾರೆ. 'ತುಂಗಭದ್ರೆ', 'ಆನಂದ', 'ಕಾಮನ ಬಿಲ್ಲು', 'ಸಣ್ಣಸಂಗತಿ' ಮೊದಲಾದವು ಈ ರೀತಿಯವೇ. ಕಣವಿ ಅವರು ಈ ಹಿನ್ನೆಲೆಯಲ್ಲಿ

> ''ಪ್ರೇಮ ಗೀತೆಗಳಲ್ಲೂ ಕವಿ ಪಡೆದ ಸಿದ್ಧಿ ಹೀಗೆ ವಾತ್ಸಲ್ಯ ಗೀತೆಗಳಲ್ಲಿಯೂ ಕೌಶಲ್ಯ ಪೂರ್ಣವಾಗಿ ಕಂಗೊಳಿಸುತ್ತದೆ. ಸಹಜತೆ, ಶುಚಿತ್ವ, ಸುಕುಮಾರತೆ, ಸೂಕ್ಷ್ಮ ನಿರೀಕ್ಷಣೆ, ಸೌಂದರ್ಯ ಪ್ರಜ್ಞೆ, ಜೀವನೋತ್ಸಾಹ ಮೊದಲಾದ ಗುಣಗಳನ್ನು ಇವರ ಇತರ ಉತ್ತಮ ಕವಿತೆಗಳಲ್ಲಿಯಂತೆ ಇಲ್ಲಿಯೂ ಧಾರಾಳವಾಗಿ ಕಾಣುತ್ತೇವೆ'' ಎಂದು ಅಭಿಪ್ರಾಯಪಟ್ಟಿರುವುದು ಸಮಂಜಸವಾಗಿದೆ.

'ಇರುವಂತಿಗೆ' ಸಂಕಲನದಲ್ಲಿ ಹೆಚ್ಚು ಜನಪ್ರಿಯವಾದ 'ಅಕ್ಕಿಯಾರಿಸುವಾಗ' ಪ್ರೇಮ ಕವನ ಇದೆ. 'ಮೈಸೂರ ಮಲ್ಲಿಗೆ' ಯ ರೀತಿಯದ್ದೇ ಆದರೂ ಇದು ಯಾವುದೇ ರೂಪಕಗಳನ್ನು ಬಳಸದೆ ರಚಿಸಿರುವುದು ಈ ಕವಿತೆಯಲ್ಲಿನ ವಿಶೇಷತೆ. ಸರಳ ಸಹಜವಾದ ಮಾತುಗಳಲ್ಲಿ ಹೆಣ್ಣನ್ನು ವರ್ಣಿಸುವ ಧಾಟಿ ಇಲ್ಲಿನ ಮುಖ್ಯವಾದ ಅಂಶ ಆಗಿದೆ.

ಕೆ. ಎಸ್.ನ ಅವರು 'ಶಿಲಾಲತೆ' ಮತ್ತು 'ಮನೆಯಿಂದ ಮನೆಗೆ' ಕವನ ಸಂಕಲನಗಳ ಮೂಲಕ ಭಿನ್ನ ಆಗುತ್ತಾರೆ. ಸುಕುಮಾರ ಜಗತ್ತಿನಿಂದ ಹೊರಗೆ ನಿಂತು ಆಲೋಚಿಸುವುದನ್ನು ಸಾಧ್ಯವನ್ನಾಗಿಸಿಕೊಂಡರು. ಈ ವೇಳೆಗಾಗಲೇ ಅವರು ಯೇಟ್ಸ್, ಎಲಿಯಟ್, ಏಜ್ರಾಪೌಂಡ್, ಆಡೆನ್ ಮೊದಲಾದವರ ಕಾವ್ಯದಿಂದ ಪ್ರಭಾವಿತರಾಗಿದ್ದರು. ನವೋದಯದಿಂದ ನವ್ಯದ ಕಡೆಗೆ ಹೊರಳಿ ನಿಂತ ಕಾಲಘಟ್ಟ ಇದಾಗಿತ್ತು. ಇಲ್ಲಿಂದ ಮುಂದಕ್ಕೆ ಕೆ. ಎಸ್. ನ ಅವರು ದೈನಂದಿನ, ವೈಯಕ್ತಿಕ ಹಾಗೂ ಸಾರ್ವಜನಿಕ ಬದುಕಿನ ಸಾಮಾನ್ಯ ಸಂಗತಿಗಳನ್ನು ಕಾವ್ಯದ ಮೂಲಕ ಹಿಡಿದಿಡುವ ಪ್ರಯತ್ನ ಮಾಡಿದರು. ಇಂಥ ಕೆಲವು ಬದಲಾದ ಅಂಶಗಳನ್ನು ಗಮನಿಸಿ ಬಿ. ಆರ್. ಲಕ್ಷ್ಮಣರಾವ್ ಅವರು -

''ಭಾವದಿಂದ ವಿಚಾರದ ಕಡೆಗೆ, ಛಂದೋಬದ್ಧತೆಯಿಂದ ಮುಕ್ತ ಛಂದಸ್ಸಿನ ಕಡೆಗೆ, ವ್ಯಷ್ಟಿಯಿಂದ ಸಮಷ್ಟಿಯ ಕಡೆಗೆ, ವಾಚ್ಯ ಸರಳತೆಯಿಂದ ಸೂಚ್ಯ ಸಂಕೀರ್ಣತೆಯ ಕಡೆಗೆ ಕವಿ ಹೊರಳಿದ್ದರೂ, ಇವರ ಕಾವ್ಯಕ್ಕೊಂದು ಗಟ್ಟಿಯಾದ ತಾತ್ವಿಕ ನೆಲೆಗಟ್ಟು, ಅನನ್ಯ ಜೀವನ ದೃಷ್ಟಿ ಲಭ್ಯವಾದವು''- ಎಂಬುದಾಗಿ ಅಭಿಪ್ರಾಯ ಪಟ್ಟಿದ್ದಾರೆ. ಕೆ. ಎಸ್. ನ ಅವರ ಬದಲಾದ ಕಾವ್ಯದ ಸಂದರ್ಭವನ್ನು ವಿಶ್ಲೇಷಿಸುತ್ತಾ ಕವಿ ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ ಅವರು ಇನ್ನೊಂದು ಅಂಶವನ್ನು ಹೀಗೆ ಗುರುತಿಸುತ್ತಾರೆ:''ಇವರು ಹೊಸಕಾವ್ಯ ಕ್ರಮಕ್ಕೆ ಹೊರಳಿದ ಮೇಲೆ ಕೆ. ಎಸ್. ನ ಮಾಡಿದ ಒಂದು ವಿಶೇಷ ಸಾಧನೆಯೆಂದರೆ ಉತ್ತಮ ಗದ್ಯದ ಶ್ರೇಷ್ಠ ಅಂಶಗಳಿಂದ ತಮ್ಮ ಕಾವ್ಯವನ್ನು ಕಸಿಗೊಳಿಸಿಕೊಂಡಿದ್ದು ''.

ಕೆ. ಎಸ್. ನ ಅವರ ಕಾವ್ಯದ ಚರಿತ್ರೆಯಲ್ಲಿ 'ಶಿಲಾಲತೆ' ತನ್ನದೇ ಆದ ಸ್ಥಾನವನ್ನು ಕಂಡುಕೊಳ್ಳುತ್ತದೆ. ಇಲ್ಲಿನ ಭಾಷೆ, ಶಿಲ್ಪ, ಪ್ರತಿಮೆ, ವಸ್ತು ಹಾಗೂ ಜೀವನ ದರ್ಶನಗಳು ಕವಿಯಲ್ಲಿನ ಹೊಸ ಹುರುಪಿನ ನೋಟವೊಂದನ್ನು ಹೊರಹೊಮ್ಮಿಸಿವೆ. ಇವರು ನವ್ಯದ ಬೆನ್ನೇರಿ ಎಷ್ಟರಮಟ್ಟಿಗೆ ಯಶಸ್ವಿ ಆದರು ಎಂಬುದರ ಬಗ್ಗೆ ವಿಮರ್ಶಕರಲ್ಲಿ ಮಿಶ್ರ ಪ್ರತಿಕ್ರಿಯೆಗಳು ಉಂಟು. ಖ್ಯಾತ ವಿಮರ್ಶಕ ಕೀರ್ತಿನಾಥ ಕುರ್ತುಕೋಟಿ ಅವರು - ''ಕೆ.ಎಸ್.ನ ಅವರಲ್ಲಿ ವಸ್ತುಪ್ರಜ್ಞೆ ಹಾಗೂ ಕಲಾಪ್ರಜ್ಞೆಗಳೆರಡೂ ದೂರ ಸಿಡಿದು ನಿಂತಿವೆ''- ಎಂದು ಹೇಳುತ್ತಾರೆ. ಈ ವಾದವನ್ನು ಎಲ್ಲ ವಿಮರ್ಶಕರು ಒಪ್ಪಿಕೊಳ್ಳುತ್ತಾರೆ ಎಂದು ಹೇಳಲು ಬರುವುದಿಲ್ಲ.

ಬಿಳಿಯ ಹೂಗಳ ಕವಿತೆ, ರಾತ್ರಿಯಲಿ ದೂರದಲಿ ಎಲ್ಲೋ ಓಲಗ, ಇಡದಿರು ನನ್ನ ನಿನ್ನ ಸಿಂಹಾಸನದ ಮೇಲೆ, ಬರಿಗೊಡಗಳಿಗೆ ಸಮಾಧಾನ, ಬೆಳಗಿನ ಮಂಜು, ಗಡಿಯಾರದಂಗಡಿಯ ಮುಂದೆ-ಮೊದಲಾದ ಕವಿತೆಗಳು 'ಶಿಲಾಲತೆ' ಸಂಕಲನಕ್ಕೆ ಪ್ರಬುದ್ಧತೆಯನ್ನು ತಂದುಕೊಟ್ಟಿವೆ. ಇಲ್ಲಿನ ಕೆಲವು ಕವನಗಳು ಅಡಿಗರ ಕವನಗಳಿಗೆ ಸರಿಸಮನಾಗಿ ನಿಲ್ಲುವುದನ್ನು ಗಮನಿಸಬಹುದು. ಈ ಸಂದರ್ಭದಲ್ಲಿಯೇ ಕೆ. ಎಸ್. ನ ಮತ್ತು ಅಡಿಗರಿಗೆ ಒಂದು ರೀತಿಯ ಸಾಂಸ್ಕೃತಿಕ ಸಂವಾದ ಆರಂಭ ಆದದ್ದು.

ಕೆ. ಎಸ್. ನ ಅವರು ಪ್ರತಿಮೆಗಳ ಮಾರ್ಗವನ್ನು ಹಿಡಿದ ಹಂತವೂ ಇದೇ ಆಗಿದೆ. 'ಬಿಳಿಯ ಹೂಗಳ ಕವಿತೆ...' ವಿಮರ್ಶಕರ ಗಮನ ಸೆಳೆದದ್ದೇ ಅಲ್ಲದೆ ಹೆಚ್ಚು ಚರ್ಚೆಗೂ ಒಳಪಟ್ಟಿತ್ತು. ಎಚ್. ಎಸ್. ರಾಘವೇಂದ್ರರಾವ್ ಅವರು ಕವನದ ಎಲ್ಲ ಮಜಲುಗಳನ್ನು ವಿಶ್ಲೇಷಿಸಿ, ವಿಮರ್ಶಿಸುವ ಪ್ರಯತ್ನ ಮಾಡಿದ್ದಾರೆ.

ಅವರು- ''ಈ ಕವನ ಕೇವಲ ಕಾವ್ಯದ ಮೇಲೆ ಬರೆದ ಇನ್ನೊಂದು ಕವನವಲ್ಲ. ಒಂದು ಜೀವನ ವಿಧಾನಕ್ಕೆ. ಒಂದು ಮನೋಧರ್ಮಕ್ಕೆ ಬರೆದ ಭಾಷ್ಯ''- ಎಂದು ಅಭಿಪ್ರಾಯಪಟ್ಟಿದ್ದಾರೆ.

ಹೆಚ್ಚು ಸಂಕೀರ್ಣ ಅನ್ನಿಸಿಕೊಂಡಿರುವ 'ಗಡಿಯಾರದಂಗಡಿಯ ಮುಂದೆ' ಕವನ ವಿಮರ್ಶಕರಿಂದ ತಪ್ಪಿಸಿಕೊಂಡಿಲ್ಲ. ಈ ಕವನವನ್ನು ಎಚ್. ಎಂ. ಚೆನ್ನಯ್ಯ ಹಾಗೂ ಸುಮತೀಂದ್ರ ನಾಡಿಗ ಅವರುಗಳು ಅದರ ಭಾಷೆ, ಪ್ರತಿಮಾದೃಷ್ಟಿ, ಸಂಕೇತ, ಅನುಭವಗಳೊಂದಿಗೆ ಬೇರ್ಪಡಿಸದೆ ಸಾವಯುವ ಶಿಲ್ಪದ ನೋಟದಲ್ಲಿ ಗುರುತಿಸುತ್ತಾರೆ. ಆದರೆ ವಿಮರ್ಶಕ ಕಿ. ರಂ. ನಾಗರಾಜ ಅವರು ಇವರಿಗಿಂತ ಸ್ವಲ್ಪ ಭಿನ್ನವಾಗಿ 'ಗಡಿಯಾರದಂಗಡಿಯ ಮುಂದೆ' ಕವನವನ್ನು ಗ್ರಹಿಸುವ ಪ್ರಯತ್ನ ಮಾಡಿದ್ದಾರೆ. ಅವರು ಈ ಕವನವನ್ನು ನೋಡುವುದು - ಲಯಗಾರಿಕೆ ಮತ್ತು ಆಕಾರದ ರೂಪದಲ್ಲಿ ಭಾವನಿಷ್ಟವಾದ ಅನುಭವವೊಂದಕ್ಕೆ ಹೇಗೆ ರೂಪ ಕೊಡಲು ಸಾಧ್ಯ ಎಂಬ ನಿಟ್ಟಿನಲ್ಲಿ. ಈ ಹಿನ್ನೆಲೆಯಲ್ಲಿಯೇ ಕಿ. ರಂ. ಅವರು-

> ''ಈ ಕವನದ ಅನುಭವಗಳು ಕಾಲದ ಶೋಧನೆಯಲ್ಲಿ ಮನುಷ್ಯ ತೊಡಗಿರುವಂತೆ ಮೇಲುನೋಟಕ್ಕೆ ತೋರಿಬಂದರೂ ಕಾಲ ತನ್ನನ್ನೂ ಒಳಗೊಂಡು ಮೀರಿರುವ ಪ್ರಜ್ಞೆಯಾಗಿ ಗೋಚರಿಸುತ್ತದೆ.''

- ಎಂದು ಅಭಿಪ್ರಾಯಪಟ್ಟಿರುವುದು. ಒಟ್ಟಿನಲ್ಲಿ ಈ ಕವನದ ಕೇಂದ್ರ ಪ್ರತಿಮೆಯಾಗಿ ನಿಲ್ಲುವ 'ಕಾಲ' ತನ್ನದೇ ಆದಂಥ ಸಂಕೀರ್ಣತೆಯನ್ನು ಅಭಿವ್ಯಕ್ತಿಸುತ್ತದೆ.

'ಇಡದಿರು ನನ್ನ ನಿನ್ನ ಸಿಂಹಾಸನದ ಮೇಲೆ' ಕವನವು 'ಅಪ್ಪ ನೆಟ್ಟ ಆಲದ ಮರ'ವನ್ನು ನೆನಪಿಗೆ ತರುವಂಥದ್ದು. ನಿಷೇಧ-ವಿರೋಧಗಳನ್ನು ಅಭಿವ್ಯಕ್ತಿಸುವ ಕವನದ ಶೀರ್ಷಿಕೆ ಸಂಪ್ರದಾಯಕ್ಕೆ ವಿರುದ್ಧವಾಗಿ ನಿಲ್ಲುತ್ತದೆ. ತಂದೆಯ ಊಳಿಗಮಾನ್ಯತೆಯನ್ನು ಧಿಕ್ಕರಿಸಿ ಬಂಡಾಯವೇಳುವ ಯುವ ಪೀಳಿಗೆಯ ಮಗನೊಬ್ಬನ ಧೋರಣೆ ಈ ಕವಿತೆಯ ವಸ್ತು. ಇಲ್ಲಿ ಸ್ವಾಭಿಮಾನ-ಸ್ವೋಪಜ್ಞತೆಗಳು ಸ್ಥಾನ ಪಡೆದಿವೆ. ವೇಣುಗೋಪಾಲ ಸೊರಬ ಮತ್ತು ಬಿ. ಆರ್. ಲಕ್ಷ್ಮಣರಾವ್ ಅವರುಗಳು ಈ ಕವನವನ್ನು ' ಸಿರಿಮಲ್ಲಿಗೆ'ಯಲ್ಲಿ ವಿಶ್ಲೇಷಿಸಿದ್ದಾರೆ. ಅಂತೆಯೇ ಪ್ರತಿವರ್ಷವೂ ಸೋಲನ್ನು ಅನುಭವಿಸುತ್ತಾ ಬಂದಿರುವ 'ಹಿಂದಿನ ಸಾಲಿನ ಹುಡುಗರು' ಕವನ ಹೆಚ್ಚು ಗಮನ ಸೆಳೆದಿದೆ. ಈ ಹುಡುಗರಿಗೂ ಸಹ ಪ್ರತ್ಯೇಕ ಸಿದ್ಧಾಂತವೊಂದು ಇರುತ್ತದೆ ಎಂಬುದನ್ನು ಕವಿ ನವುರಾದ ಹಾಸ್ಯದೊಂದಿಗೆ ಅವರ ವಕಾಲತ್ತು ವಹಿಸಿ ಹೇಳಿದ್ದಾರೆ.

'ಮನೆಯಿಂದ ಮನೆಗೆ' ಕವನದಲ್ಲಿ ಕವಿಯು ಪ್ರತಿವರ್ಷವೂ 'ಔಟ್ ಹೌಸ್' ನಿಂದ ಅಲೆಯುವ ಸಂಸಾರದ ನೈಜ ಚಿತ್ರಣವನ್ನು ಹೆಣೆದಿದ್ದಾರೆ. ಕೆಳ ಮಧ್ಯಮ ವರ್ಗದ ಕುಟುಂಬವೊಂದರ ಸ್ಪಷ್ಟ ಚಿತ್ರವನ್ನು ಇಲ್ಲಿ ಕಾಣಬಹುದು. ಇಲ್ಲಿನ ಹೆಜ್ಜೆ ಗುರುತು, ಚರಿತ್ರೆಯ ಪ್ರಶ್ನೆಪತ್ರಿಕೆ, ಸುವರ್ಣ ಮಧ್ಯಮ ಕವನಗಳು ಚರ್ಚೆಗೆ ಒಳಪಟ್ಟಿವೆ. ಹಿಂದಿನ ಸಂಕಲನದ 'ಇಡದಿರು....' ಎಂಬ ಕವನಕ್ಕಿಂತ ಭಿನ್ನವಾಗಿ ನಿಲ್ಲುವ ಕವನ 'ಹೆಜ್ಜೆ ಗುರುತು'. ಅಲ್ಲಿ ತಂದೆಯನ್ನು ಮೂದಲಿಸುವ ಮಗ ಇಲ್ಲಿ ಭೂಮಾತೆಯ ವೈಭವವನ್ನು ಕಾಣುತ್ತಾನೆ. ಹಾಗೆಯೇ 'ಚರಿತ್ರೆಯ ಪ್ರಶ್ನೆ ಪತ್ರಿಕೆ' ಕವನ ಕೆ. ಎಸ್. ನ ಅವರ ಇತರೆ ಕವನಗಳಿಗಿಂತ ಭಿನ್ನವಾಗಿ ನಿಲ್ಲುತ್ತದೆ. ಇದರ ಒಳನೋಟಗಳನ್ನು ನೀಡುವ ಚಿ.ಶ್ರೀನಿವಾಸರಾಜು ಅವರು -

''ಇತಿಹಾಸದ ಸ್ವರೂಪ, ಪ್ರಾಮಾಣಿಕತೆ ಮತ್ತು ಪ್ರಭಾವಗಳ ಪರಿಶೀಲನೆ ಈ ಕವನದ ವಸ್ತು. ಇತಿಹಾಸವನ್ನು ಬದಲಿಸುವ ಮಾನವನ ಪ್ರಯತ್ನದ ಲಘುವಿಡಂಬನೆ ಕೂಡ ಇಲ್ಲಿ ಕಾಣುತ್ತದೆ. ಅನ್ನ ಋಣ, ಕಣ್ಣ ಬಣ್ಣಕ್ಕೆ ತಕ್ಕಂತೆ ಇತಿಹಾಸ ನಿರ್ಮಾಣವಾಗಿ, ಸತ್ಯ ಸಂಗತಿಗಳು ಸೋರಿ ಹೋದ ಈ 'ಆಪಾದ ಮಸ್ತಕ ಚರಿತ್ರೆ'ಯಿಂದ ತಪ್ಪಿಸಿಕೊಳ್ಳುವುದು ಸಾಧ್ಯವೇ ಇಲ್ಲ. ವಿದ್ಯಾರ್ಥಿ ಗತಕಾಲದ ಚರಿತ್ರೆಯ ಬಗ್ಗೆ ಅಜ್ಞಾನ ಆವರಿಸಿದ್ದರೂ ತಿಳಿದವನಂತೆ ಪರೀಕ್ಷಾಭವನಕ್ಕೆ ಬಂದು ಕೂಡುವುದೇ ಇಲ್ಲಿನ ವಿಶೇಷ'' ಎನ್ನುವುದರ ಮೂಲಕ ವಿಶ್ಲೇಷಿಸಿದ್ದಾರೆ. 'ಸುವರ್ಣ ಮಧ್ಯಮ' ಕವನವೂ ಗಮನ ಸೆಳೆಯುವಂಥದ್ದು. ಮಾನವನ ಬದುಕಿನ ಸಂವೇದನೆಗಳೊಂದಿಗೆ ಬೆಸುಗೆ ಹಾಕಿ ನೋಡುವುದರೊಂದಿಗೆ ಕುರ್ತಕೋಟಿ ಅವರು ಈ ಕವನವನ್ನು ವಿಶ್ಲೇಷಿಸಿದ್ದಾರೆ.

೧೯೭೭ರಲ್ಲಿ 'ತೆರೆದ ಬಾಗಿಲು' ಸಂಕಲನ ಪ್ರಕಟ ಆಯಿತು. ಸುಮಾರು ೧೬ ವರುಷಗಳ ಕಾಲ ಅವರು ಯಾವುದೇ ಸಂಕಲನವನ್ನು ಪ್ರಕಟಿಸಿರಲಿಲ್ಲ. ಈ ನಡುವಣ ಕಾಲವನ್ನು ವಿಮರ್ಶಕರು 'ಚಿಂತನೆಯ ಕಾಲ ' ವೆಂದು ಗುರುತಿಸುತ್ತಾರೆ. ಕಾವ್ಯದ ಬಗ್ಗೆ ಪರ್ಯಾಲೋಚನೆ ನಡೆಸಿದ್ದ ಕೆ. ಎಸ್. ನ ಅವರು 'ತೆರೆದ ಬಾಗಿಲು' ಮೂಲಕ ಕೆಲವು ಹೊಸ ನೋಟಗಳನ್ನು ಕೊಟ್ಟರು. ತೆರೆದ ಬಾಗಿಲಿನ ಕೆಲವು ಕವಿತೆಗಳು ಏಜ್ರಾಪೌಂಡ್‌ನ ಕ್ಯಾಂಟೋಸ್ (ಸರ್ಗಗಳಿಂದ) ಗಳಿಂದ ಪ್ರಭಾವಿತವಾಗಿವೆ. ಅಲ್ಲದೆ ಎಲಿಯಟ್‌ನ 'Four Quartets' ಸಹ ಹೆಚ್ಚು ಪ್ರಭಾವ ಬೀರಿದೆ. ಅಂದರೆ ಕವಿಯು ಉದ್ದೇಶಪೂರ್ವಕವಾಗಿಯೇ ಕಾವ್ಯರಚನೆಗೆ ಗದ್ಯವನ್ನು ಹಾಯಿಸಿಕೊಳ್ಳುವ ಪ್ರಯತ್ನ ಮಾಡಿದ್ದಾರೆ. ಉದಾಹರಣೆಗೆ 'ಕುಂಕುಮ ಭೂಮಿ', 'ತೆರೆದ ಬಾಗಿಲು', 'ಮುಚ್ಚಿದ ಕಿಟಕಿ,' 'ಅನುಮಾನ', 'ಮೂರನೆಯ ಸಲಹೆ', 'ಆರತಿಯ ಸಂಜೆ ', 'ಭೂತಕನ್ನಡಿ', 'ಕುಶಲ ಪ್ರಶ್ನೆ' ಮೊದಲಾದ ಸರ್ಗಗಳನ್ನು ನೋಡಬಹುದು.

ತಾತ್ವಿಕವಾಗಿ ಬದಲಾಗಿದ್ದ ಕವಿಯ ಅನ್ನಿಸಿಕೆಗಳು ಹೊಸ ಆಯಾಮದ ಕಾವ್ಯವನ್ನು ರಚಿಸುವಂತೆ ಮಾಡಿದ್ದವು. ಅದರ ಪರಿಣಾಮವೇ 'ತೆರೆದ ಬಾಗಿಲು'. ಇಲ್ಲಿನ ಬಹುಪಾಲು ಕವನಗಳಲ್ಲಿ 'ಸಾವು' ಪ್ರಧಾನವಸ್ತು ಆಗಿದೆ. ಅಲ್ಲದೆ ಮುಪ್ಪು, ಏಕಾಂಗಿತನಗಳೂ ಸಹ ಕೆಲವೆಡೆ ಪ್ರಧಾನವಾಗಿ ಅಭಿವ್ಯಕ್ತಗೊಂಡಿವೆ. ಈ ಹಿನ್ನೆಲೆಯಲ್ಲಿಯೇ ಪಿ. ಲಂಕೇಶ್ ಅವರು ತಮ್ಮ 'ಅಕ್ಷರ ಹೊಸಕಾವ್ಯ'ದ ಮುನ್ನುಡಿಯಲ್ಲಿ -

''ತೆರೆದ ಬಾಗಿಲು ಕವನದಲ್ಲಿ ನರಸಿಂಹಸ್ವಾಮಿ ವೈಯಕ್ತಿಕ ಜಗತ್ತನ್ನು ನುಡಿಕಟ್ಟಿಗೆ ಬಗ್ಗಿಸಿಕೊಳ್ಳುವ ಯತ್ನ ಬೆರಗುಗೊಳಿಸುವಷ್ಟು ಯಶಸ್ವಿಯಾಗಿದೆ...... ಸಾವಿನ ದುರಂತ, ಸಾವಿನ ತಮಾಷೆ, ಸಾವಿನ ಅಬ್ಸರ್ಡಿಟಿ- ಮೂರನ್ನೂ ತೋರುವ ಈ ಕವನ ಪ್ರೇಮ, ವಿರಹ, ಒಬ್ಬಂಟಿತನದ ಅವರ ವಸ್ತುಗಳನ್ನು ಅನುಭವದ ತುಟ್ಟ ತುದಿಗೆ ತಂದು ನೋಡುವ ಪ್ರಯತ್ನವಾಗಿಯೂ ನೋಡಬಹುದು. ಮತ್ತೊಂದು

ಕುತೂಹಲಕರ ಸಂಗತಿ, ಕವಿಯ ಶೈಲಿ ಮತ್ತು ಚಿತ್ತಾರಕ್ಕಿಂತ ವಸ್ತುವಿನ ಮೇಲೆ ನಮ್ಮ ಗಮನ ನೆಡುತ್ತದೆ''

-ಎಂದು ಹೇಳಿರುವುದು. ಈ ಸಂಕಲನದ 'ರೈಲ್ವೆ ನಿಲ್ದಾಣದಲ್ಲಿ' ಎಂಬ ಕವನ ಮಾನವೀಯ ಸಂಬಂಧಗಳನ್ನು ಹೇಳುತ್ತದೆ. ಜನನಿಬಿಡ ವ್ಯಾವಹಾರಿಕ ನೆಲೆಯಲ್ಲಿ ತಾಯಿ-ಮಗಳು-ಮಗುವಿನ ವಾತ್ಸಲ್ಯಗಳು ಅಭಿವ್ಯಕ್ತವಾಗಿವೆ. ಯಂತ್ರ ಜಗತ್ತಿನಲ್ಲಿ ಮಾನವೀಯ ಸಂಬಂಧಗಳನ್ನು ಹಿಡಿದಿಡುವ ಪ್ರಯತ್ನ ಈ ಕವನದ್ದು. ಅದೇ ರೀತಿಯದು 'ಇವನು ಹುಟ್ಟಿದ ಹಬ್ಬ' ಸಹ. ಕೆಳ ಮಧ್ಯಮ ವರ್ಗ, ವಿಶ್ರಾಂತಿ ಜೀವನ, ಒಂಟಿತನ, ಮುಪ್ಪು, ಹೊರಗಿನ ಹದಗೆಟ್ಟ ಜಗತ್ತು, ಒಳಗಿನ ಕೊರತೆಗಳ ಬದುಕು, ಮೊದಲಾದ ಅಂಶಗಳನ್ನು ಬಿಚ್ಚಿ ಇಡುತ್ತದೆ 'ಇವನ ಹುಟ್ಟಿದ ಹಬ್ಬ'. ಪ್ರಾಮಾಣಿಕವಾದ ವ್ಯಕ್ತಿಯೊಬ್ಬನ ಬದುಕಿನ ಸ್ಥಿತಿಯನ್ನು ಕವಿ ಇಲ್ಲಿ ಸುಂದರವಾಗಿ ಚಿತ್ರಿಸಿದ್ದಾರೆ.

'ತೆರೆದ ಬಾಗಿಲು' ಸಂಕಲನದ ಅನಂತರ 'ನವಪಲ್ಲವ' ಮತ್ತು 'ದುಂಡುಮಲ್ಲಿಗೆ' ಎಂಬ ಎರಡು ಸಂಕಲನಗಳು ಪ್ರಕಟ ಆಗಿವೆ. ಇವುಗಳಲ್ಲಿನ ಕವನಗಳು ಅಲ್ಲಲ್ಲಿ ಬಿಡಿಬಿಡಿಯಾಗಿ ಪ್ರಕಟ ಆಗಿದ್ದಂಥವು. ಭಾವಗೀತೆಗಳ ಸ್ವರೂಪದ ಈ ಕವನಗಳನ್ನು ಹಾಡಲಿಕ್ಕಾಗಿಯೇ ಬರೆಯಲಾಗಿದೆ. ಇಲ್ಲೂ ಸಹ ಪ್ರೇಮಗೀತೆಗಳು ಇಲ್ಲದಿಲ್ಲ. ಬಹುಶಃ 'ಮೈಸೂರ ಮಲ್ಲಿಗೆ'ಯನ್ನು ನೆನಪು ಮಾಡಲು ಈ ಕವನಗಳನ್ನು ರಚಿಸಿದ್ದಾರೆ ಅನ್ನಿಸುತ್ತದೆ. ಹಿಂದಿನ ಸಂಕಲನಗಳಲ್ಲಿ ಬರೆದಂಥ 'ಕನ್ನಡ ಮಾಧ್ಯಮ', 'ನಿನಗೆ ಕನ್ನಡದೊಳಗೆ ಹೆಸರಿಲ್ಲವೆ' ಎಂಬ ನಾಡು-ನುಡಿಯ ಅಭಿಮಾನದ ಕವನಗಳು ಈ ಸಂಕಲನಗಳಲ್ಲೂ ಇವೆ. ಉದಾಹರಣೆಗೆ 'ಕರ್ನಾಟಕ ಗೀತೆ,' 'ಕರ್ನಾಟಕ ರಾಜ್ಯೋತ್ಸವ', 'ನಾಡಿನ ಏಕತೆ' ಮೊದಲಾದುವುಗಳನ್ನು ಗಮನಿಸಬಹುದು. ಕವಿ ತನ್ನ ಕನ್ನಡದ ಅಭಿಮಾನವನ್ನು ಮಿತವರಿತು ವ್ಯಕ್ತಪಡಿಸಿದ್ದಾರೆ. ಎಲ್ಲಿಯೂ ಸಂಕುಚಿತವಾಗಿ ನಡೆದುಕೊಂಡಿಲ್ಲ.

ಕೆ. ವಿ. ನಾರಾಯಣ ಅವರು ಕವಿಯು 'ಶಿಲಾಲತೆ'ಗೆ ಬರುವ ವೇಳೆಗೆ ಸಮಕಾಲೀನ ಕಾವ್ಯದ ಭಾಷೆಗೆ ಮರಳುವುದನ್ನು ಗುರುತಿಸುತ್ತಾರೆ. ಅಲ್ಲದೆ ಸಮಕಾಲೀನ ಸಾಮಾಜಿಕ ವೈಷಮ್ಯಗಳು ಹಾಗೂ ಬದುಕಿನ ವೈರುಧ್ಯಗಳು ಕೆ. ಎಸ್. ನ ಕಾವ್ಯದ ಆಶಯಗಳಿಗೆ ಹೇಗೆ ಪ್ರೇರಕ ನೆಲೆಗಳಾಗುತ್ತವೆ ಎಂಬುದನ್ನು ಒಂದೆಡೆ ಕೆ. ವಿ. ನಾರಾಯಣ ಅವರೇ ಚರ್ಚಿಸಿರುವುದನ್ನು ಗಮನಿಸಬಹುದು. ಕೆ. ಎಸ್. ನ ಅವರು ತಾನು ಒಬ್ಬ ಸಂಸ್ಕೃತದ ವಿದ್ಯಾರ್ಥಿ ಆಗಿದ್ದರೂ ಆದಷ್ಟು ಕನ್ನಡದ ಪದಗಳನ್ನೇ ಬಳಸಿರುವುದಾಗಿ ಹೆಮ್ಮೆಪಟ್ಟುಕೊಳ್ಳುತ್ತಾರೆ. ಜನಸಾಮಾನ್ಯರಲ್ಲೊಬ್ಬನಾಗಿ ಅವರ ಮಧ್ಯೆಯೇ ಇದ್ದು ಅವರಿಂದಲೇ ಕಲಿತಂಥ ಆಡುಭಾಷೆಯನ್ನೇ ಕಾವ್ಯದಲ್ಲಿ ದುಡಿಸಿಕೊಂಡಿರುವುದಾಗಿ ಕವಿ ಹೇಳಿದ್ದಾರೆ. ಆದ್ದರಿಂದಲೇ ಅವರ ಕಾವ್ಯ ಎಲ್ಲರಿಗೂ ಹಿಡಿಸುವುದು.

ಕಳೆದ ಐದಾರು ದಶಕಗಳಿಂದ ಕಾವ್ಯ ರಚನೆಯಲ್ಲಿ ತೊಡಗಿರುವ ಕವಿ ಕೆ.ಎಸ್.ನ. ಅವರ ಚಿಂತನಾಕ್ರಮ ಕಾಲದಿಂದ ಕಾಲಕ್ಕೆ ಹೇಗೆ ಬದಲಾಯಿತು ಎಂಬುದಕ್ಕೆ ಅವರ

ಕವನಗಳೇ ದಾಖಲೆ. ವಿಮರ್ಶಕ ಟಿ. ಪಿ. ಅಶೋಕ ಅವರು ಕೆ. ಎಸ್. ನ ಅವರ ಕಾವ್ಯವನ್ನು ವಿಮರ್ಶಿಸುತ್ತಾ-

''ಬೇಂದ್ರೆ, ಕಂಬಾರರಂತೆ ಶಿಷ್ಟ ಸಂಕೋಲೆಗಳನ್ನೆಲ್ಲ ಮುರಿದು ಮುನ್ನುಗ್ಗುವಂಥ ತೀವ್ರತೆ ನರಸಿಂಹಸ್ವಾಮಿಯವರಲಿಲ್ಲ. ಅಡಿಗರಷ್ಟು ಶಿಷ್ಟವಾದ ಚಿಂತನಾಕ್ರಮವೂ ಇವರಲ್ಲಿಲ್ಲ. ಆದರೆ ನರಸಿಂಹಸ್ವಾಮಿಯವರ ಸರಳತೆಯೇ ಅವರ ಕಾವ್ಯದ ಸಾಮರ್ಥ್ಯ, ಸೌಂದರ್ಯ. ತೀರ ಸರಳವಾದದ್ದನ್ನೆಲ್ಲ ಸುಂದರಗೊಳಿಸಿ ವಾಸ್ತವಕ್ಕೆ ಕಣ್ಮುಚ್ಚುವ ಅಪ್ರಬುದ್ಧತೆ, ಅಪ್ರಾಮಾಣಿಕತೆ ಅವರಲ್ಲಿಲ್ಲ.''

- ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ. ಕೆ. ಎಸ್. ನ. ಅವರಲ್ಲಿ ನಮ್ರತೆ ಇದೆ. ಈ ನಮ್ರತೆಯೇ ಅವರನ್ನು 'ಅಹಂ' ನಿಂದ ಪಾರು ಮಾಡಿರುವುದು. ತಿದ್ದಿಕೊಳ್ಳುವುದರ ಮೂಲಕ ಮುಂದುವರೆಯಲು ಇಷ್ಟಪಟ್ಟವರು ಕೆ. ಎಸ್. ನ. ಅವರು ತಮ್ಮ ಕಾವ್ಯದ ಬಗ್ಗೆ

''ನನ್ನ ಕವಿತೆ ಎಂದರೆ ಇಷ್ಟೇ : ಕೆಲವು ಕವನಗಳು, ಕೆಲವು ಗೀತೆಗಳು, ಕೆಲವು ಪ್ರಯತ್ನಗಳು, ಕೆಲವು ಫಲಗಳು, ಕೆಲವು ದೂರದ ಬೆಳಕು, ಕೆಲವು ಹತ್ತಿರದ ದನಿ''-

- ಎಂಬುದಾಗಿ ನಿರ್ವಚಿಸಿಕೊಳ್ಳುತ್ತಾರೆ. ತಮ್ಮನ್ನು ತಾವು ಸಮೀಕ್ಷೆ-ಪರೀಕ್ಷೆ ಮಾಡಿಕೊಳ್ಳುವ ಜಾಯಮಾನ ಅವರದು. ಆದ್ದರಿಂದಲೇ ಹಾ. ಮಾ. ನಾಯಕರು -

''ಕಾವ್ಯಸೃಷ್ಟಿಯಲ್ಲಿ ಹೀಗೆ ಆತ್ಮ ಸಮೀಕ್ಷೆ ಮಾಡಿಕೊಳ್ಳುವವರು ಬಹಳ ಕಡಿಮೆ. ನರಸಿಂಹಸ್ವಾಮಿಯವರಿಗೆ ಕಾವ್ಯೇತರ ಸಿದ್ಧಿ ಪ್ರಸಿದ್ಧಿಗಳಿಲ್ಲ. ಈ ದಿನಗಳಲ್ಲಿ ಅವರಂಥ ಶುದ್ಧ ಕವಿಗಳು ಸಿಕ್ಕುವುದು ದುರ್ಲಭ'' ಎಂದಿರುವುದು.

ಪಿ. ಲಂಕೇಶ್ ಅವರು ನರಸಿಂಹಸ್ವಾಮಿ ಅವರ ಕಾವ್ಯವನ್ನು ವಿಶ್ಲೇಷಿಸುವುದು ಈ ರೀತಿಯಲ್ಲಿ. ಅವರು :

''ಕೆ. ಎಸ್. ನರಸಿಂಹಸ್ವಾಮಿ ರೋಮ್ಯಾಂಟಿಕ್ ಸಂದರ್ಭದಲ್ಲಿ ಸೀಮಿತ ಸ್ವಾರಸ್ಯದ ಪ್ರಖ್ಯಾತ ಕವಿ. ಆದರೆ ಇವರ ಧ್ವನಿ ಗಂಭೀರವಾಗತೊಡಗಿ ವ್ಯಕ್ತಿಯ ಆಳದ ಅನ್ನಿಸಿಕೆಗಳನ್ನು ಹೇಳತೊಡಗಿದಾಗ ಪದ್ಯದ ಗತಿ ಬದಲಾಗತೊಡಗಿತು. ತಾತ್ವಿಕವಾಗಿ ಸುವರ್ಣ ಮಧ್ಯಮ ಅನುಸರಿಸಿದರೂ ವೈಯಕ್ತಿಕ ಜರೂರಿನಿಂದ ಆವೃತವಾಗಿ ಹೊಸ ಅರ್ಥವಂತಿಕೆ ಗಳಿಸಿಕೊಳ್ಳತೊಡಗಿದವು''

- ಎಂದು ಗುರುತಿಸಿದ್ದಾರೆ. ಇದಿಷ್ಟು ಕೆ. ಎಸ್. ನ ಕಾವ್ಯದ ಬಗೆಗಿನ ಮುಖ್ಯವಾದ ವಿಮರ್ಶೆಗಳ ಸಂಗ್ರಹ - ಸಮೀಕ್ಷೆ ಹಾಗೂ ವಿಶ್ಲೇಷಣೆ ಆಗಿರುತ್ತದೆ. ನರಸಿಂಹಸ್ವಾಮಿ ಅವರು 'ರೋಮ್ಯಾಂಟಿಕ್ ಕವಿ' ಎಂದೇ ಪ್ರಸಿದ್ಧರು. ಆದರೆ ಕೆಳಮಧ್ಯಮ ವರ್ಗದ ನೋವು-ನಲಿವುಗಳನ್ನು ಬಹಳ ಹತ್ತಿರದಿಂದ ಅನುಭವಿಸಿದವರೂ ಹೌದು.

# ಪ್ರಶಸ್ತಿ - ಪುರಸ್ಕಾರಗಳು

ಕನ್ನಡ ಸಾಹಿತ್ಯಕ್ಕೆ ಕೆ. ಎಸ್. ನ ಅವರ ಕೊಡುಗೆ ನೆನಪಿಡುವಂಥದ್ದು. ಸಹೃದಯ ಕನ್ನಡಿಗರು ಅವರನ್ನು ಆರಂಭದಿಂದಲೂ ಪುರಸ್ಕರಿಸುತ್ತಲೇ ಬಂದಿದ್ದಾರೆ. ಈ ಹಿನ್ನೆಲೆಯಲ್ಲಿ ಅವರಿಗೆ ದೊರೆತಿರುವ ಕೆಲವು ಪ್ರಶಸ್ತಿ - ಪುರಸ್ಕಾರಗಳನ್ನು ಉಲ್ಲೇಖಿಸುವುದು ಸೂಕ್ತ ಅನ್ನಿಸುತ್ತದೆ.

ಕೆ. ಎಸ್. ನ ಅವರ 'ಮೈಸೂರ ಮಲ್ಲಿಗೆ' ಪ್ರಕಟ ಆದ ಮರು ವರುಷವೆ (೧೯೪೩) 'ದೇವರಾಜ ಬಹದ್ದೂರ್ ಪ್ರಶಸ್ತಿ'ಯನ್ನು ಪಡೆಯಿತು. ಆರನೆಯ ಸಂಕಲನವಾದ 'ಶಿಲಾಲತೆ'ಗೆ ೧೯೫೭ ರಲ್ಲಿ ಮೈಸೂರು ರಾಜ್ಯದ ಸಂಸ್ಕೃತಿ ಪ್ರಸಾರ ಇಲಾಖೆಯ ಬಹುಮಾನ ದೊರೆತಿದೆ. ೧೯೬೫ರಲ್ಲಿ ಕಾರವಾರದಲ್ಲಿ ನಡೆದಂಥ ೪೭ನೆಯ ಸಾಹಿತ್ಯ ಸಮ್ಮೇಳನದಲ್ಲಿನ 'ಕಾವ್ಯಮಂಥನ'ದ ಗೋಷ್ಠಿಗೆ ಕೆ. ಎಸ್. ನ ಅವರೆ ಅಧ್ಯಕ್ಷರು. ೧೯೬೮ರಲ್ಲಿ 'ದಕ್ಷಿಣ ಭಾರತ ಹಿಂದಿ ಪ್ರಚಾರ ಸಭೆ' ಎಂಬ ಸರ್ವಭಾಷಾ ಕವಿ ಸಮ್ಮೇಳನವೊಂದನ್ನು ನಡೆಸಲಾಯಿತು. ಇದಕ್ಕೆ ಕನ್ನಡ ಕವಿಗಳ ಪ್ರತಿನಿಧಿಯಾಗಿ ಆಯ್ಕೆಯಾದವರು ನರಸಿಂಹಸ್ವಾಮಿ ಅವರೇ ಆಗಿದ್ದಾರೆ. ೧೯೭೦ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವವನ್ನು ಆಚರಿಸಲಾಯಿತು. ಈ ಸಂದರ್ಭದಲ್ಲಿ ಕವಿಯ ಕಾವ್ಯಸಾಧನೆಗಾಗಿ ಸನ್ಮಾನಿಸಿದರು. ಕೆ. ಎಸ್. ನ ಅವರು ೧೯೭೨ರಿಂದ ೧೯೭೪ ರವರೆಗೆ ರಾಜ್ಯ ಸಾಹಿತ್ಯ ಅಕಾಡೆಮಿಯಲ್ಲಿ ಸಾಹಿತ್ಯಾಧಿಕಾರಿಯಾಗಿ ಕಾರ್ಯ ನಿರ್ವಹಿಸಿದ್ದಾರೆ.

೧೯೭೨ ರಲ್ಲಿ 'ಕರ್ನಾಟಕ ರಾಜ್ಯ ಪ್ರಶಸ್ತಿ' ಹಾಗೂ ೧೯೭೪ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳನ್ನು ಕವಿ ಕೆ. ಎಸ್. ನ ಅವರಿಗೆ ನೀಡಿ ಗೌರವಿಸಲಾಗಿದೆ. ೧೯೭೮ರಲ್ಲಿ ಇವರ 'ತೆರೆದ ಬಾಗಿಲು' ಸಂಕಲನ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಪಡೆಯಿತು. ಕೇರಳದ ಕವಿ 'ಕುಮಾರನ್ ಆಶಾನ್ ಪ್ರಶಸ್ತಿ'ಯನ್ನು ಕನ್ನಡದ ಕವಿ ಕೆ. ಎಸ್. ನ ಅವರಿಗೆ ನೀಡುವುದರ (೧೯೭೮) ಮೂಲಕ ಅವರನ್ನು ಗುರುತಿಸಲಾಗಿದೆ. ೧೯೭೬ರಲ್ಲಿ ನಡೆದ ೪೯ ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಗೆ ಶ್ರೀಯುತರೇ ಅಧ್ಯಕ್ಷರು. ಅಲ್ಲದೆ ೧೯೯೦ ರ ಮೇ ೧೨ ರಂದು 'ಮೈಸೂರ ಮಲ್ಲಿಗೆ'ಯ ೫೦ರ ಉತ್ಸವ (ಚಿನ್ನದವರ್ಷ) ವನ್ನು ಆಚರಿಸಲಾಗಿದೆ. ಇವರ ಅನೇಕ ಕವನಗಳನ್ನು ಕರ್ನಾಟಕದ ಪ್ರಸಿದ್ಧ ಹಿನ್ನೆಲೆ ಗಾಯಕರು, ಸಂಗೀತಗಾರರು ಬಳಸಿಕೊಳ್ಳುವುದರ ಮೂಲಕ ಗೌರವ ಸೂಚಿಸಿದ್ದಾರೆ. 'ಮೈಸೂರ ಮಲ್ಲಿಗೆ' ಆಡಿಯೋ ಕ್ಯಾಸೆಟ್ ಅಲ್ಲದೆ ೧೯೯೧ರಲ್ಲಿ ಅದೇ ಹೆಸರಿನ ಚಲನಚಿತ್ರವೂ ಬಿಡುಗಡೆ ಆಗಿದೆ. ಟಿ.ಎಸ್. ನಾಗಾಭರಣ ಅವರು ಈ ಚಿತ್ರವನ್ನು ಉತ್ತಮ ರೀತಿಯಲ್ಲಿ ನಿರ್ದೇಶಿಸಿದ್ದಾರೆ.

ಚಲನಚಿತ್ರವೊಂದಕ್ಕೆ ಕತೆಯನ್ನು ಹೆಣೆಯಲು ಕವಿಯ ಕವನಗಳನ್ನು ಆಧರಿಸಿರುವುದು ಕನ್ನಡದಲ್ಲೇ ಮೊದಲ ಪ್ರಯತ್ನ. ಈ ಗೌರವ ಕೆ. ಎಸ್. ನ ಅವರ ಕಾವ್ಯಕ್ಕೆ ಸಲ್ಲುತ್ತದೆ.

ಕನ್ನಡ ಸಾಹಿತ್ಯ ಪರಿಷತ್ತು ಇವರ ಕನ್ನಡದ ಕೆಲಸವನ್ನು ಗಮನಿಸಿ ೩೧-೧೨-೧೯೮೫ರಲ್ಲಿ ಪರಿಷತ್ತಿನ ಗೌರವ ಸದಸ್ಯತ್ವವನ್ನು ನೀಡಿದೆ. ಕೆ. ಎಸ್. ನ ಅವರ ವೈಯಕ್ತಿಕ ಹಾಗೂ ಸರಕಾರಿ ಸೇವೆಯಲ್ಲಿನ ಪ್ರಾಮಾಣಿಕತೆ, ಶಿಸ್ತಿನ ಜೀವನವನ್ನು ನೆನಪಿನಲ್ಲಿ ಇಟ್ಟುಕೊಂಡು 'ಚಂದನ' ಕ್ಕೆ ಹೋಲಿಸಲಾಗಿದೆ. ಇದೇ ಹೆಸರಿನಲ್ಲಿ ಇವರ ಸ್ನೇಹಿತರು ಅಭಿನಂದನಾ ಗ್ರಂಥವೊಂದನ್ನು ಹೊರತಂದಿದ್ದಾರೆ. ೧೯೭೨ ರಲ್ಲಿ ಪ್ರಕಟವಾದ ' ಚಂದನ'ಕ್ಕೆ ಕವಿ ಜಿ. ಎಸ್. ಶಿವರುದ್ರಪ್ಪ ಅವರು ಸಂಪಾದಕರು. ಇದರಲ್ಲಿ ನಾಡಿನ ಸಹೃದಯ ಗೆಳೆಯರ ಅತ್ಯುತ್ತಮ ವಿಮರ್ಶಾ ಲೇಖನಗಳು ಇವೆ.

# ಅನುಬಂಧ - ೧

## ಕೆ. ಎಸ್. ನ. ಅವರ ಕೃತಿಗಳು

**ಅ. ಕವನ ಸಂಕಲನಗಳು**

೧) ಮೈಸೂರ ಮಲ್ಲಿಗೆ ೧೯೪೨
೨) ಐರಾವತ ೧೯೪೫
೩) ದೀಪದ ಮಲ್ಲಿ ೧೯೪೭
೪) ಉಂಗುರ ೧೯೪೯
೫) ಇರುವಂತಿಗೆ ೧೯೫೨
೬) ಶಿಲಾಲತೆ ೧೯೫೮
೭) ಮನೆಯಿಂದ ಮನೆಗೆ ೧೯೬೦
೮) ತೆರೆದ ಬಾಗಿಲು ೧೯೭೬
೯) ನವ ಪಲ್ಲವ ೧೯೮೩
೧೦) ಮಲ್ಲಿಗೆಯ ಮಾಲೆ (ಸಮಗ್ರ ಕಾವ್ಯ) ೧೯೮೬
೧೧) ದುಂಡು ಮಲ್ಲಿಗೆ ೧೯೯೩
೧೨) ಮಲ್ಲಿಗೆಯ ಮಾಲೆ ೧೯೯೪
(ಸಮಗ್ರ ಕಾವ್ಯ) (೧೯೪೨-೧೯೯೪)

**ಆ. ಗದ್ಯಕೃತಿಗಳು**

೧) ಮಾರಿಯ ಕಲ್ಲು ೧೯೪೨
೨) ಉಪವನ ೧೯೫೮
೩) ದಮಯಂತಿ ೧೯೬೦

**ಇ. ಅನುವಾದಗಳು**

1) ಮೋಹನ ಮಾಲೆ ೧೯೫೬
2) ನನ್ನ ಕನಸಿನ ಭಾರತ ೧೯೬೧

3) ಪ್ರಪಂಚದ ಬಾಲ್ಯದಲ್ಲಿ ೧೯೬೫
4) ಮೀಟ್ರಿಯಾ ೧೯೬೬
5) ಹಕಲ್‌ಬರಿಫಿನ್ನನ ಸಾಹಸಗಳು ೧೯೬೯
6) ಸುಬ್ರಹ್ಮಣ್ಯ ಭಾರತಿ ೧೯೭೧
7) ಪುಷ್ಕಿನ್ನನ ಕವಿತೆಗಳು ೧೯೭೧
8) ಮಾಯಾ ಶಂಖ ಮತ್ತು ಇತರ ಕತೆಗಳು ೧೯೭೨
9) ರಾಣಿಯ ಗಿಳಿ ಮತ್ತು ರಾಜನ ಮಂಗ ೧೯೭೨

# ಅನುಬಂಧ - ೨

## ಹೆಚ್ಚಿನ ಓದಿಗಾಗಿ


ಅನಂತನಾರಾಯಣ. ಎಸ್., (೧೯೭೬), ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ, ಬೆಂಗಳೂರು; ರಾಜಲಕ್ಷ್ಮಿ ಪ್ರಕಾಶನ

ಕುರ್ತಕೋಟಿ, ಕೀರ್ತಿನಾಥ., (೧೯೬೩), ನವ್ಯಕಾವ್ಯ ಪ್ರಯೋಗ, ಧಾರವಾಡ; ಮನೋಹರ ಗ್ರಂಥಮಾಲೆ.

ಗೋಕಾಕ್. ವಿ.ಕೆ., (೧೯೭೫), ನವ್ಯತೆ, ಮೈಸೂರು ; ಸುರುಚಿ ಪ್ರಕಾಶನ

ಚಂದ್ರಶೇಖರ್. ಎಂ. ಮತ್ತು ಇತರರು, (೧೯೯೦), ಸಂಸ್ಕೃತಿ ದೀಪಮಾಲೆ, ಮೈಸೂರು; ಕನ್ನಡ ಸಾಹಿತ್ಯ ಕಲಾಕೂಟ.

ತಲ್ವಾಡಿ. ಬಿ. ಎಸ್., (೧೯೯೩), ಆಧುನಿಕ ಕನ್ನಡ ಕವಿಚರಿತ್ರೆ, ಮೈಸೂರು; ಭಾವನಾ ಪ್ರಕಾಶನ.

ಬಸವರಾಜ್. ಆರ್., (೧೯೯೧), ಅಗ್ರಪೂಜೆ, ಚಿಕ್ಕನಾಯಕನಹಳ್ಳಿ; ಶೃಂಗಾರ ಪ್ರಕಾಶನ.

ಬಾಲಸುಬ್ರಹ್ಮಣ್ಯ, ನರಹಳ್ಳಿ., (೧೯೯೦), ಕೆ. ಎಸ್.ನ ನುಡಿಮಲ್ಲಿಗೆ; ಬೆಂಗಳೂರು; ಕೃತಿ ಪ್ರಕಾಶನ.

ಬಾ. ಕಿ. ನ., (೧೯೯೦), ಸಿರಿಮಲ್ಲಿಗೆ, ಬೆಂಗಳೂರು; ಲಿಪಿ ಪ್ರಕಾಶನ.

ರಾಘವೇಂದ್ರರಾವ್. ಎಚ್. ಎಸ್., (೧೯೮೯), ನಿಲುವು, ಬೆಂಗಳೂರು; ಕ್ರೈಸ್ಟ್ ಕಾಲೇಜ್.

ರಾಘವೇಂದ್ರರಾವ್. ಎಚ್. ಎಸ್., (೧೯೯೦), ಪ್ರಗತಿಶೀಲತೆ, ಬೆಂಗಳೂರು; ಕರ್ನಾಟಕ ಸಾಹಿತ್ಯ ಅಕಾಡೆಮಿ.

ರಾಘವೇಂದ್ರರಾವ್. ಎಚ್. ಎಸ್., (೧೯೮೧) ವಿಶ್ಲೇಷಣೆ, ಬೆಂಗಳೂರು; ಕ್ರೈಸ್ಟ್ ಕಾಲೇಜು ಕನ್ನಡ ಸಂಘ.

ಲಂಕೇಶ್. ಪಿ., (೧೯೭೦), ಪ್ರಸ್ತುತ, ಸಾಗರ; ಅಕ್ಷರ ಪ್ರಕಾಶನ

ಲಂಕೇಶ್. ಪಿ., (೧೯೯೪), ಅಕ್ಷರ ಹೊಸಕಾವ್ಯ, ಸಾಗರ; ಅಕ್ಷರ ಪ್ರಕಾಶನ

ಶಿವರುದ್ರಪ್ಪ. ಜಿ. ಎಸ್., (ಸಂ), (೧೯೭೨), ಚಂದನ (ಕೆ. ಎಸ್.ನ ಅಭಿನಂದನ ಗ್ರಂಥ) ಬೆಂಗಳೂರು; ಕೆ. ಎಸ್. ನ ಅಭಿನಂದನಾ ಸಮಿತಿ.

ಶಿವರುದ್ರಪ್ಪ. ಜಿ. ಎಸ್., (೧೯೭೨), ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು, ಬೆಂಗಳೂರು ; ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ.

ಸಿದ್ಧಲಿಗಂಯ್ಯ. ಜಿ. ಎಸ್. ಮತ್ತು ಕೃಷ್ಣಯ್ಯ ಎಂ. ಎಚ್. (ಸಂ.)., (೧೯೯೦), ಸಾಲುದೀಪಗಳು, ಬೆಂಗಳೂರು; ಕರ್ನಾಟಕ ಸಾಹಿತ್ಯ ಅಕಾಡೆಮಿ

**ಪತ್ರಿಕೆಗಳು/ನಿಯತಕಾಲಿಕಗಳು**

೧) ಉದಯವಾಣಿ (ದೀಪಾವಳಿ ವಿಶೇಷಾಂಕ) ೧೯೮೮.

೨) ಕನ್ನಡ ಪ್ರಭ (ಸಾಪ್ತಾಹಿಕ ಪ್ರಭ) ೨-೧೨-೧೯೯೦

೩) ಗ್ರಂಥಲೋಕ (ಸಂಪುಟ-೧೫, ಸಂಚಿಕೆ-೧)

೪) ತುಷಾರ ಫೆಬ್ರವರಿ-೧೯೯೦ ರ ಸಂಚಿಕೆ

೫) ಪ್ರಜಾವಾಣಿ (ದೀಪಾವಳಿ ವಿಶೇಷಾಂಕ) ೧೯೯೦
ಪ್ರಜಾವಾಣಿ (ಸಾಪ್ತಾಹಿಕ ಪುರವಣಿ- ೯.೧೨.೧೯೯೦)

೬) ಶೂದ್ರ (ಸಂಪುಟ-೬ ಸಂ-೧೬)

೭) ಸಾಧನೆ (ಸಂಪುಟ-೭, ಸಂಚಿಕೆ-೧)

೮) ಸುಧಾ (೧-೭-೧೯೯೦)

೯) ರುಜುವಾತು (ಸಂ-೫, ಅಕ್ಟೋಬರ್-ಡಿಸೆಂಬರ್-೧೯೮೩)

೧೦) ಸಂವಾದ (ಸಂ -೫)

೧೧) Deccan Herald (Sunday Herald ೧೦-೬-೧೯೯೦)

೧೨) INDIAN EXPRESS (೧೫-೧೨-೧೯೯೦)

೧೩) ಲಂಕೇಶ್ ಪತ್ರಿಕೆ (೧೭-೮-೯೪)

**ಇತ್ಯಾದಿ**

ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಮತ್ತು ಡಾ. ಮಂಜುಳಾ ಅವರುಗಳು ಕೆ.ಎಸ್.ನ ಅವರ ಸಾಹಿತ್ಯವನ್ನು ಕುರಿತಂತೆ ಪಿಎಚ್.ಡಿ. ಅಧ್ಯಯನವನ್ನು ಮಾಡಿರುತ್ತಾರೆ.

ಈ ಕಿರುಹೊತ್ತಿಗೆಯನ್ನು ಬರೆಯಲು ಕವಿ ಕೆ. ಎಸ್. ನ ಅವರೊಂದಿಗೆ ಸಂದರ್ಶನ ಮಾಡಲಾಗಿದೆ.

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು